# ಅನುಕ್ರಮಣಿಕೆ

# ಕವಿಯ ಕೋಲು

## ದೇವರಿಗೆ

ಅಂತರಂಗದ ಶಕ್ತಿ
ವಿಶ್ವವಾಳುವ ಶಕ್ತಿ ;
ಅಂತರಂಗದ ದೀಪ್ತಿ
ವಿಶ್ವ ಬೆಳಗುವ ದೀಪ್ತಿ–
ನಡುವಿರುವ ಮಾಯೆಮೋಹವನೆಲ್ಲ ಕಳಚಯ್ಯ.

ಸ್ಥೂಲ ಸೂಕ್ಷ್ಮದ ಭಾರ
ಪಂಚಭೂತದ ಭಾರ,
ಕಾಲಪಾಶದ ಉರುಲು
ಪಂಚೇಂದ್ರಿಯಗಳುರುಲು–
ಆತ್ಮಪಕ್ಷಿಯ ಕಾಲ್ಗಳಿಂ ತೆಗೆದು ಬಿಸುಡಯ್ಯ.

ಬ್ರಹ್ಮಾಂಡ ಕೋಟಿಗಳು
ಪ್ರಳಯಕ್ಕೆ ತುತ್ತಾಗಿ
ಬ್ರಹ್ಮದಲಿ ಅಡಗಿರಲಿ ;
ಮೇಲೆ ಹಾರುವ ಶಕ್ತಿ
ಸರ್ವ ಶಕ್ತಿಗಳೆಸಗೆ, ಸಹನೆ ನಿನಗಿರಲಯ್ಯ.

---

## ತತ್ವಜ್ಞಾನಿ

ಜಟಕಾ ಹೊಡೆಯುವ ಕೆಲಸವ ಬಿಟ್ಟು
ಹೆಂಡಿರ ಮಕ್ಕಳ ಎಲ್ಲರ ಬಿಟ್ಟು
ತಟ್ಟನೆ ಬಲು ವೈರಾಗ್ಯವ ತೊಟ್ಟು
ನಡೆದೇ ನಡೆದನು ಜಟಕಾ ಸಾಬಿ
ಸಾಬಿಯು ಜನರಲಿ ರಂಗು ಗುಲಾಬಿ.

ಹೆಂಡಿರು ಮಕ್ಕಳು ಹುಡುಕಾಡಿದರು
ಪೇಟೆಯ ಸಾಬಿಗಳಲೆದಾಡಿದರು.
"ಅಯ್ಯೋ! ಹೋದನೆ ನಮ್ಮಯ ಸಾಬಿ!
ಎಲ್ಲರ ಮೆಚ್ಚಿನ ಜಟಕಾ ಸಾಬಿ!
ಬೀಡಿಯ ಕುಡಿಯದ ಒಳ್ಳೆಯ ಸಾಬಿ!"
ಎಂದೆಲ್ಲಾ ಜನ ಹಲುಬುತ್ತಿರಲು
ಊರೇ ಸಾಬಿಯ ಮಾತಾಗಿರಲು
ಕಣ್ಮರೆಯಾದನು ಜಟಕಾ ಸಾಬಿ
ಸಾಬಿಯು ಜನರಲಿ ರಂಗು ಗುಲಾಬಿ.

ತಾರಾಗಡಣದಿ ಬಲು ಹುಡುಕುತ್ತ
ಭೂಮಿಯು ಸುತ್ತಿತು ಸೂರ್ಯನ ಸುತ್ತ
ಹುಡುಕೇ ಹುಡುಕಿತು ಸುತ್ತೇ ಸುತ್ತಿತು
ಒಂದೆರಡಾಯಿತು, ನಾಲ್ಕೂ ಆಯಿತು,
ಮಡಿಲೊಳಗಿರುವಾ ಕುಲದೀಪಕನ
ಬಾಳ್ಕೆಯ ಕಡಲಿನ ಸುಖ ಚಂದ್ರಮನ
ಕಡುದುಕ್ಕದಿ ಊರೆಲ್ಲಾ ತೊಳಲಿ

ಹುಡುಕುವ ಮಾತೆಯ ರೀತಿಯಲಿ.
ಕಾಣದೆ ಹೋದನು ನಾಲ್ಕೇ ವರ್ಷ
ಬಂದಾಗುಕ್ಕಿತು ಎಲ್ಲರ ಹರ್ಷ.
ಎಲ್ಲಡಗಿದ್ದನೊ ! ಏಕಡಗಿದ್ದನೊ !
ಬಲ್ಲವರುಂಟೇ ಸಾಬಿಯ ಮರ್ಮ.
ಬಂದಾಗಿದ್ದುದು ಬಲು ಕಸಿವಾಡಿ
ಚಂದದಿ ಬೆಳಸಿದ ಮೊಳದಾ ದಾಡಿ
ಮೈಮೇಲಿದ್ದುದು ಕಾವಿಯ ಬಟ್ಟೆ
ಕೈಯಲ್ಲಿದ್ದುದು ಭಿಕ್ಷದ ತಟ್ಟೆ
ಕೊರಳಲಿ ಮಣಿಗಿಣಿಗಳು ಏನಿಲ್ಲ
ಬೂಟಾಟದ ಚಿಹ್ನೆಗಳೇನಿಲ್ಲ
ಸಂಸಾರದ ಜಂಜಾಟವ ಹೊಲ್ಲ
ಹೊನ್ನನು ಹೆಣ್ಣನು ಮಣ್ಣನು ಒಲ್ಲ
ಕುಹಕ ಕುವಾಕ್ಯಗಳೊಂದೂ ಸಲ್ಲ
ಶಾಂತಿಯ ಕಾಂತಿಯ ಮೂರುತಿಯವನು
ಸಾತ್ವಿಕ ಸಾಕಾರದ ಘನನವನು
ದಾರಿಯ ತೋರ್ಪಾ ಜ್ಯೋತಿರ್ಲತೆಯು
ಹೊನ್ನನು ಮಾಳ್ಪಾ ಪರುಷದ ಮಣಿಯು.

ತತ್ವವ ಹೇಳಲು ಚೌಕದಿ ನಿಂತ
ಹೊಳೆದವು ತತ್ವದ ಸಾಲಿನ ದಂತ
“ ಇವನೊಬ್ಬನು ಹೊಸಬನು ಮೌಲಾನ
ಉತ್ತರ ದೇಶದ  ಘನ ಮೌಲಾನ
ಬಾಯಿಗೆ ಬರುವುದು ಎಲ್ಲ ಕುರಾನ
ಜಗದೊಳಗಿನ ಸಿದ್ಧಾಂತಗಳೆಲ್ಲ

ಕವಿಯ ಸೋಲು

ಈತನ ಕೈಯಲಿ ಸಕ್ಕರೆ ಬೆಲ್ಲ;
ಕನ್ನಡ ಬಲ್ಲನು ಕನ್ನಡ ಜಾಣ
ಇವನೇ ಕುಮತ ಧ್ವಂಸಕ ಬಾಣ
ಇಸ್ಲಾಮಿನ ಸಂತಸ ಸುಮಬಾಣ''
ಎಂದೆಲ್ಲಾ ಜನ ಬಳಿ ಸೇರಿದರು
ನೆರೆ ಕಿಕ್ಕಿರಿಯುತ ಗುಡಿ ಕಟ್ಟಿದರು
ಬಿಡುಗಣ್ಣಿಂದವನಂ ನೋಡಿದರು
ನಾಲಗೆ ತಣಿವನ್ನಂ ಹೊಗಳಿದರು.

ಕಣ್ಣದು ತಿಳಿವಿನ ಮಣಿಯಂತಿಹುದು
ಮುಖವದು ಮೋಕ್ಷದ ಫಲದಂತಿಹುದು
ದಾಡಿಯೆ ತತ್ವದ ಮಳೆಯಂತಿಹುದು
ನುಡಿಯಾನಂದದ ಹೊನಲಂತಿಹುದು
ಶಾಂತಿಯ ದಾಂತಿಯ ಮೃದುವಾಣಿಯಲಿ
ಸರಸ ಸುಗೀತದ ಸುಡಿ ಜಾಣ್ಮೆಯಲಿ
ತತ್ವಜ್ಞಾನಿಯು ಹೇಳುತ ನಿಂತ
ತತ್ವವ ಹೇಳುತ ಚೌಕದಿ ನಿಂತ.
" ಘನತರ ತತ್ವವ ಹೇಳುವೆ ನಿಮಗೆ
ಅಲ್ಲಾ ಕೊಡುವನು ಸೌಖ್ಯವ ನಿಮಗೆ
ಬೀದಿಯ ಮಾತೆಂದರಿಯಲು ಬೇಡಿ
ಘನ ತತ್ವಾಮೃತ, ಸವಿಯನು ನೋಡಿ.
ಹಿಂದಿನ ಕತೆಯನು ಹೇಳುವೆ ನಿಮಗೆ
ಇಂದಿನ ಗತಿಯದು ತಿಳಿವುದು ನಿಮಗೆ
ದೇವರು ಒಬ್ಬನೆ, ಪೈಗಂಬರರೆ
ದೇವರ ದೂತರು, ಮತ್ತಾರಿಲ್ಲ

ಇಸ್ಲಾಂ ಧರ್ಮ ಸನಾತನ ಧರ್ಮ
ಜಗವನು ಉಳಿಸುವ ಉನ್ನತ ಧರ್ಮ.
ಕಡಿದಾಡುವ ಬಡಿದಾಡುವ ಜನರ
ಮಕ್ಕಳ ಹೆಣ್ಗಳ ಕೊಲ್ಲುವ ಜನರ
ಕಲ್ಲೂ ಮಣ್ಣೂ ಪೂಜಿಪ ಜನರ
ಸತ್ಕಾರ ಮಾಡಲು ಒಟ್ಟಿಗೆ ಮಾಡಲು
ದೇವರು ಯೋಚಿಸಿ ಹೊರಟನು ಮುಂದೆ
ಒಡನೆಯೆ ಸೈತಾನ್ ಹೊರಟನು ಹಿಂದೆ
ದೇವರು ಸಂಕಲ್ಪಿಸಿ ಹೊರಟಿರಲು
ಬೆನ್ನಲಿ ಸೈತಾನನು ಬರುತಿರಲು
ದೇವರು ಕೇಳಿದ ಚೋದ್ಯವಪಟ್ಟು
ಮನದಲಿ ಕರುಣವ ಸಂಕಟಪಟ್ಟು
'ಎಲ್ಲಿಗೆ ಪಯಣವು? ಏನುದ್ದೇಶ?
ಆರಿಗೆ ಹೂಡಿದೆ ಸರ್ವವಿನಾಶ?'
ಸೈತಾನ್ ಎಂದನು ನಗೆಸೂಸುತ್ತ
ವಕ್ರದ ನೋಟವ ನೆರೆ ಬೀರುತ್ತ
'ನಿನ್ನಯ ಕೆಲಸಕೆ ಅರಬೀಸ್ಥಾನ
ಎನ್ನಯ ಕೆಲಸಕೆ ಹಿಂದೂಸ್ಥಾನ'
ದೇವರು ಒಬ್ಬನೆ, ಪೈಗಂಬರರೆ
ದೇವರದೂತರು, ಮತ್ತಾರಿಲ್ಲ
ಇಸ್ಲಾಂ ಧರ್ಮ ಸನಾತನ ಧರ್ಮ
ಉಳಿದದ್ದೆಲ್ಲಾ ಸೈತಾನ್ ಧರ್ಮ."

ಈ ಮಾತನು ಕೇಳಿದ ಕೆಲ ಜನರು
"ಇವನೊಬ್ಬನು ಹೆದ್ದಾಡಿಯ ಸಾಬಿ

ದಾಡಿಯು ಬೆಳೆದರೆ ಬೆಳೆವುದೆ ಬುದ್ದಿ
ಸಾಬಿಯ ಬುದ್ಧಿ, ಕತ್ರಿಯ ಲದ್ದಿ ''
ಎಂದೆಲ್ಲಾ ಕೋಪದಿ ಕೂಗಿದರು.
ಆದುದು ಗಜಬಿಜಿಯಾಗುಂಪಿನಲಿ
ಜ್ಞಾನಿಯು ಹೇಳಿದ ಸಂತೋಷದಲಿ
'' ದಾಡಿಯ ಹಳಿಯದೆ ಬೆಳೆಯಿಸಿರಣ್ಣ
ದಾಡಿಯೆ ಮೋಕ್ಷಕೆ ಒಯ್ಯುವುದಣ್ಣ
ದಾಡಿಯೆ ತತ್ವಜ್ಞಾನಿಯ ಗುರುತು
ದಾಡಿಯೆ ವೀರರ ಧೀರರ ಗುರುತು
ದಾಡಿಯೆ ಪೆಣ್ಗಳ ಮೆಚ್ಚಿಪ ಗುರುತು
ದಾಡಿಯೆ ಏಕಚ್ಛತ್ರದ ಗುರುತು ;
ಮೀಸೆಯ ಬೋಳಿಸಿ ಗಡ್ಡವ ಬೋಳಿಸಿ
ಶೌರ್ಯವ ಧೈರ್ಯವ ಎಲ್ಲಾ ಬೋಳಿಸಿ
ಮಿಣಮಿಣ ಮೆರೆಯುವ ಹೇಡಿಗಳನ್ನು
ನಮ್ಮಲಿ ಕೂಡರು ಗೊಂಜೆಗಳನ್ನು.
ಕೇಳಿರಿ, ನಿಮ್ಮಯ ಪೂರ್ವದ ಜನಗಳು
ವೇದವ್ಯಾಸರು ವಾಲ್ಮೀಕಿಗಳು
ದಾಡಿಯ ಬೆಳೆಯಿಸೆ ಕವಿತೆಯು ಬಂತು
ಕವಿತೆಯ ಜತೆಯಲಿ ಘನತೆಯು ಬಂತು
ಕವಿತೆಯು, ಘನತೆಯು ಲೋಕದಿ ನಿಂತು
ಇಂದೂ ಮನ್ನಣೆ ಪಡೆಯುತ್ತಿಹುದು
ಎಂದೆಂದೂ ಮನ್ನಣೆ ಪಡೆಯುವುದು.
ಹಿಂದಿನ ಋಷಿಗಳು ವನವಾಸಿಗಳು
ದಾಡಿಯ ಬೆಳೆಯಿಸೆ ಮಾತಪಸಿಗಳು
ದಾಡಿಗೆ ಈಗಲು ಬೆಲೆಯುಂಟಣ್ಣ

ದಾಡಿಯೆ ಶೀಲದ ಧ್ವಜಪಟವಣ್ಣಾ
ದಾಡಿಯು ಹಳಿಯದೆ ಬೆಳೆಯಿಸಿರಣ್ಣಾ
ದಾಡಿಯೆ ಮೋಕ್ಷಕೆ ಒಯ್ಯುವುದಣ್ಣಾ.''

ಈ ಮಾತನು ಕೇಳಿದ ಕೆಲ ಜನರು
ಆ ಜ್ಞಾನಿಯ ದುರ ದುರ ನೋಡಿದರು
ಹುಲ್ಲೆಗಳೆಲ್ಲಾ ಹುಲಿಯನು ತಿನ್ನಲು
ಗಿಳಿಗಳ ಬಳಗವು ಗಿಡುಗನ ತಿನ್ನಲು
ಹವಣಿಪ ತೆರದಲಿ ನೋಡಿದರವರು.
'' ಇವನೇ ಆಗಿನ ಜಟಕಾ ಸಾಬಿ
ಅವನೇ ಈಗಿನ ತತ್ವಜ್ಞಾನಿ.
ಜಟಕಾ ಹೊಡೆಯಲು ಹೋಗೆಲೊ ಸಾಬಿ
ನೀನೇ ಲೋಕದಿ ಬಲು ಅಜ್ಞಾನಿ''
ಎಂದಾ ದುರುಳರು ಕೂಗಾಡಿದರು.

ಶಾಂತಿಯ ಸತ್ಯದ ನಸುನಗೆಯಲ್ಲಿ
ತಮದ ತುರಂಗವನೋಡಿಸುತಲ್ಲಿ
ಎಲ್ಲರ ಮೆಚ್ಚಿಪ ಒಳ್ನುಡಿಯಲ್ಲಿ
ಆ ಜ್ಞಾನಿಯು ಉತ್ತರ ಹೇಳಿದನು
ತಿಳಿವಿನ ಹೊನಲನು ನೆರೆ ಹರಿಸಿದನು.
'' ಹಗಲಿರುಳೆನ್ನದೆ ದುಡಿದೂ ದುಡಿದು
ಹೆಂಡಿರ ಮಕ್ಕಳ ಸಾಕುವನರಿದು
ಜಟಕಾ ಸಾಬಿಯು ಮಾತೇಕಣ್ಣಾ
ತಿಳಿಯದೆ ಮಾತನು ಆಡುವಿರಣ್ಣಾ.
ಜಟಕಾ ಹೊಡೆಯುವ ಸಾಬಿಯೆ ರಾಜ

## ಕವಿಯ ಸೋಲು

ಆರಿಗು ಸಗ್ಗದ ಸಾಬಿಯೆ ಸಾಜ
ಹಂಗಿಲ್ಲದ ಬಾಳ್ಕೆಯೆ ಬಲು ತಾಜ
ತೇಜಿಯ ಹೂಡುವ ತೇಜದಿ ಬಾಳುವ
ರಾಜನ ಪದವಿಯ ಬದಿಗೊತ್ತಾಳುವ
ಜಟಕಾ ಹೊಡೆಯುವ ಸಾಬಿಗಳಾಗಿ
ತುರುಕರ ಮತದಭಿಮಾನಿಗಳಾಗಿ.
ಪಾಸನು ಮಾಡಿದ ಜಾಣರು ನೀವು
ಹಂಗಿನ ಭಿಕ್ಷವ ಬೇಡುವ ನೀವು
ಮಾಸವ ತಿಳಿಯದೆ ಮಾನವ ತೊರೆದು
ಬಣ್ಣನೆ ಮಾತನು ಕಲಿತಾಡುವಿರಿ
ಸಾಜನ ರಾಜನ ಬರಿದೇಳಿಪಿರಿ.
ದುಡಿವುದೆ ಮಾನವು ಬೇಡಪಮಾನ
ಒಮ್ಮನದಿಂ ದುಡಿದವ ಸುಲ್ತಾನ
ಸುಮ್ಮನೆ ಕುಳಿತರೆ ಬರಿಯಪಮಾನ
ಅವರನು ಹಿಡಿದುಂಬುವ ಸೈತಾನ.
ಜಟಕಾ ಚಕ್ರವ ಸಾಬಿಯು ಹಿಡಿದು
ಸೈತಾನನ ಸೋಮಾರಿಯ ಕಡಿದು
ಅಲ್ಲಾ ಮೆಚ್ಚಲು ಸೈ, ಸೈ ಎನಲು
ತಾನದಿ ಗಾನದಿ ನೆರೆ ಬದುಕೆನಲು
ಬದುಕುವ ಜಟಕಾ ಹೊಡೆಯುವ ಸಾಬಿ
ಮೆಚ್ಚುವಳವನನು ಕಮಲದ ಬೀಬಿ.
ತುರುಕರ ಮಾತಿಗೆ ಸೈತಾನ್ ಬಾರ
ಅವರೊಲುಮೆಗೆ ಕೊಡುವನು ಬಂಗಾರ
ಬಾಳಿನ ನಾಡಿನ ಮೇಲಧಿಕಾರ
ನಿಮಗೇನಿರುವುದು ಬರಿಯಂಗಾರ!

ಹಿಂದಿನ ಜಟಕಾ ಹೊಡೆಯುವ ಸಾಬಿ
ಇಂದಿನ ಉತ್ತಮ ತತ್ವಜ್ಞಾನಿ ;
ಜಟಕಾ ಹೊಡೆದವ ಸುಲ್ತಾನಾಗುವ
ಸುಮ್ಮನೆ ಕುಳಿತವ ಅವನಾಳಾಗುವ.
ಓದಿದ ಜಾಣರು ! ಹೇಳುವುದೇನು
ಓದಿತು ಗಿಳಿ ನೀವೋದಿದರೇನು ?
ಜಟಕಾ ಹೊಡೆಯುವ ಸಾಬಿಗಳಾಗಿ
ತುರುಕರ ಮತದಭಿಮಾನಿಗಳಾಗಿ.
ದೇವರು ಒಬ್ಬನೆ, ಪೈಗಂಬರರೆ
ದೇವರ ದೂತರು, ಮತ್ತಾರಿಲ್ಲ
ಇಸ್ಲಾಂ ಧರ್ಮ ಸನಾತನ ಧರ್ಮ
ಉಳಿದದ್ದೆಲ್ಲಾ ಸೈತಾನ್ ಧರ್ಮ.
ಒಂದೇ ದೇವರು, ಒಂದೇ ಮತವು
ಸರ್ವ ಸಮರ್ಪಕ ತುರುಕರ ಮತವು
ನೀವೇ ಸೇರಿರಿ ತುರುಕರ ಮತಕೆ
ಈ ಮತ ಬರುವುದು ನಿಮ್ಮಭಿಮತಕೆ.''
ಗುಂಪಿನ ತುಂಟರು ಆರೋ ಕೆಲರು
'' ಹೆಂಡಿರ ಮಕ್ಕಳ ಬಿಟ್ಟೋಡಿದವ !
ತತ್ವವ ಹೇಳುವ ಬಲು ಭಂಟನಿವ !
ತತ್ವವ ಕೇಳುವ ಹೆಡ್ಡರು ನಾವು
ನಡಯಿರೊ ಕೆಲಸಕೆ ಹೋಗುವ ನಾವು ''
ಎಂದಾ ಜ್ಞಾನಿಯ ಜರಿದಾಡಿದರು.

ಶಾಂತಿಯು ಸತ್ಯದ ನಸುನಗೆಯಲ್ಲಿ
ಮನಸನು ಸೆಳೆಯುವ ಪೊಸ ಬಗೆಯಲ್ಲಿ

ಅವರನು ಕರೆದನು ತತ್ವಜ್ಞಾನಿ
ಸ್ವೈರಣಿ ಸಮತಾ ಭಾವದ ಮಾನಿ.
" ಉತ್ತರ ಹೇಳುವೆ ಹೋಗದಿರಣ್ಣಾ
ಆಡಿದ ಮಾತಿಗೆ ಮುನಿಸಿಲ್ಲಣ್ಣಾ
ತತ್ವಜ್ಞಾನಿಗೆ ಮುನಿಸೇಕಣ್ಣಾ ?
ಇದ್ದರೆ ಆಗದು ನಮ್ಮಯ ಕೆಲಸ.
ಲೋಕವ ಗೆಲ್ಲುವ ಧರ್ಮದ ಕೆಲಸ.
ಹೋಗುವ ಹೋದರೆ ಹೋಗದು ಗಾಡಿ
ಹೊಟ್ಟೆಗೆ ಹಾಕುವ ಜಟಕಾ ಗಾಡಿ
ಹಿರಿಮಗ ದುಡಿವನು ಕಾಸನು ತರುವನು
ಅಮ್ಮನ ತಮ್ಮನ ನೆರೆ ಪೋಷಿಪನು
ನೀ ಹೋದರೆ ಉಳಿಯುವುದೇನಣ್ಣಾ ?
ಜಟಕಾ ಸಾಬಿಯು ಜರಿಯದಿರಣ್ಣಾ
ಜಟಕಾ ಸಾಬಿಯು ಹುರುಪಿನ ಟಗರು
ಜಗವನು ಗೆಲ್ಲುವ ಕಾಳಗ ಟಗರು
ಅವನನು ಏಳಿಸಿ ಫಲವೇನಣ್ಣಾ
ಬದುಕುವ ಮಾತನು ಹೇಳುವೆನಣ್ಣಾ
ಜಟಕಾ ಹೊಡೆಯುವ ಸಾಬಿಗಳಾಗಿ
ತುರುಕರ ಮತದಭಿಮಾನಿಗಳಾಗಿ. "

" ತತ್ವದ ಮಾತನು ಹೇಳುತಲಿದ್ದೆ
ಸೈತಾನ್ ಹೊರಟುದ ಹೇಳುತಲಿದ್ದೆ.
ಕೋಪವ ಮಾಡದೆ ಕೇಳಿರಿ ನೀವು
ಸತ್ಯಕೆ ತಾಳ್ಮೆಯ ತಾಳಿರಿ ನೀವು
ದೇವರು ಅರಬೀಸ್ಥಾನಕೆ ಹೋಗಲು

ಸೈತಾನ್ ಬಂದನು ಇಲ್ಲಿಯೆ ನೆಲಸಲು
ಬೂದಿಯನೆರಚುತ ಬಣ್ಣವ ಬಳಿಯುತ
ಮುಟ್ಟಿಯ ತಳೆಯುತ ಸೈತಾನ್ ಊದಲು
ಮಂತ್ರವ ಹೇಳುತ ಬಳಗವ ಕೂಗಲು
ತೆಗೆದರು ಶಿವದಾರವ ಜನಿವಾರ
ಹೊರಟರು ಸೈತಾನಿನ ಪರಿವಾರ
ಕಲ್ಲನು ಮಣ್ಣನು ಹೂಡಿದರಿಲ್ಲಿ
ಬರಿ ಜಗಳವ ತಂದಿಕ್ಕಿದರಿಲ್ಲಿ
ಇಲ್ಲದ ಭೇದವ ಮಾಡಿದರಿಲ್ಲಿ
ನಿಮ್ಮಯ ಸತ್ವವ ಹೀರಿದರಿಲ್ಲಿ
ಬೆಂಡನು ಹೆಣವನು ತೋರಿದರಿಲ್ಲಿ
ಪರಮಾತ್ಮನ ಮರೆಮಾಡಿದರಿಲ್ಲಿ
ಸೈತಾನ್ ಮಾಡಿದ ಮೋಸವ ತಿಳಿದು
ನಿಮ್ಮಯ ಮನದಾ ಮೋಹವ ಕಳೆದು "
ಎಂದಾ ಜ್ಞಾನಿಯು ಹೇಳುತ್ತಿರಲು
ಜನರೆಲ್ಲಾ ರೇಗುತ ಕೂಗಿಡಲು
ಹಿಡಿದರು ಅವನನು ಪೋಲೀಸ್ ಜನರು—
ನ್ಯಾಯಸ್ಥಾನಕೆ ಎಳೆದಾಡಿದರು.

ನ್ಯಾಯಾಧೀಶನ ಸಮ್ಮುಖದಲ್ಲಿ
ತತ್ವಜ್ಞಾನಿಯು ಕುಳಿತಿಹನಲ್ಲಿ
ಏನೇನೆಂದರು ಮಾತಾಡದೆಯೆ
ಆರೇನೆಂದರು ತಾ ಕೇಳದೆಯೆ
ಕುಳಿತಿರುವನು ಗಾಢ ಸಮಾಧಿಯಲಿ
ಸಾತ್ವಿಕ ಕಳೆಯನು ನೆರೆ ಬೀರುತಲಿ.

## ಕವಿಯ ಸೋಲು

ಹೇಳುವ ಮಾತನು ಪೋಲೀಸ್ ಜನರು
ದೂರುವ ಮಾತನು ಗುಂಪಿನ ಜನರು
ನ್ಯಾಯಾಧೀಶನು ಕೇಳುತಲಾಗ
ಕೊಟ್ಟನು ತಿಂಗಳು ಶಿಕ್ಷೆಯನಾಗ.
ತತ್ವಜ್ಞಾನಿಯು ಕಣ್ಣನು ತೆರೆದು
ಜ್ಞಾನದ ಬೆಳಕಿನ ತೆರೆಯನು ತೆರೆದು
ಹೊರಡಲು, ಧರ್ಮದ ಮೂರುತಿ ಎಂದನು
" ತಿಂಗಳು ಶಿಕ್ಷೆಯು ಕೊಟ್ಟಿಹೆನೀಗ
ಹೇಳುವ ಮಾತನು ಕೇಳುವೆನೀಗ
ಆಡುವುದಿದ್ದರೆ ನೀನಾಡುವುದು. "

ತತ್ವಜ್ಞಾನಿಯು ನಸುನಗುತೆಂದನು
" ಧರ್ಮದ ಮೂರುತಿ ! ನಾನೇನೆಂಬೆನು
ಸತ್ಯವ ನುಡಿದರೆ ಜೈಲಿಗೆ ಹಾಕಿ
ಮಿಥ್ಯವ ನುಡಿದರೆ ಬಿರುದನು ಹಾಕಿ ;
ಲೋಕವೆ ಕೆಟ್ಟಿತು ಒಲು ದುಷ್ಕಾಲ
ಧರ್ಮಕೆ ಬಂದುದು ಒಲು ಬರಗಾಲ.
ಸತ್ಯದ ಮಾತಿಗೆ ಶಿಕ್ಷೆಯದುಂಟೆ ?
ಸತ್ಯವ ತಡೆಯುವ ಗೋಡೆಗಳುಂಟೆ ?
ಸತ್ಯವ ಬಿಗಿಯುವ ಸರಳುಗಳುಂಟೆ ?
ಸತ್ಯವ ಸೋಲಿಪ ಧೀರರದುಂಟೆ ?
ಲೋಕವೆ ದೊಡ್ಡದು ಬಂದೀಖಾನೆ
ಸೈತಾನ್ ಮಾಡಿದ ಬಂದೀಖಾನೆ.
ತತ್ವವ ತಿಳಿದರೆ ಗೋಡೆಗಳುರುಳಿ
ಪಂಚೇಂದ್ರಿಯ ಬಂಧನ ತಾನುರುಳಿ

ಮನಸಿನ ಮದಗಜ ನೆಲದಲಿ ಹೊರಳಿ
ಬಿಗಿಸಿದ ಸರಳದು ಸುತ್ತಲು ಅರಳಿ
ಮೋಕ್ಷವೆ ಎದುರಿಗೆ ನಿಂದಿಹುದಣ್ಣಾ
ತುರುಕರ ಮತವೇ ಶಾಶ್ವತವಣ್ಣಾ ;
ಒಂದೇ ದೇವರು, ಒಂದೇ ಮತವು
ಸರ್ವಸಮರ್ಪಕ ತುರುಕರ ಮತವು.
ಬದುಕುವ ಮಾತನು ಹೇಳುವೆನಣ್ಣಾ
ತುರುಕನು ಹೇಳಲು ಕೇಡೇನಣ್ಣಾ
ಸತ್ಯವೆ ದೇವರು ಸತ್ಯವ ಹೇಳುವೆ
ಸತ್ಯಕೆ ಜಾತಿಯು ಏತಕೆ ನೋಡುವೆ
ಇಸ್ಲಾಂ ಧರ್ಮ ಸನಾತನ ಧರ್ಮ
ಉಳಿದದ್ದೆಲ್ಲಾ ಸೈತಾನ್ ಧರ್ಮ.
ಹೆಚ್ಚೋ ಕಡಮೋ ಎಂಬುದ ಕಳೆದು
ಸರ್ವರು ಸಮವಾಗಿಹುದನು ತಿಳಿದು
ಮೂರ್ತಿಯ ಹಂಗನು ನೆಟ್ಟನೆ ತೊರೆದು
ದೇವರನೊಲಿಸುವ ಜಟಕಾ ಸಾಬಿ
ನಿಲುಕದು ಅಲ್ಲಿಗೆ ನಿಮ್ಮಯ ಬುದ್ಧಿ.
ಇರುವುದೆ ನರಕವು ಜಟಕಾ ಸಾಬಿಗೆ ?
ಇರುವುದೆ ಮುಕ್ತಿಯು ನಿಮಗೊಬ್ಬರಿಗೆ ?
ಅವನನು ಏಳಿಸಿ ಮೆರೆಯುವ ನೀವು
ಬಾಳನು ತಿಳಿಯದ ಹೆಡ್ಡರು ನೀವು
ಧರ್ಮವನರಿಯದ ಕುರುಡರು ನೀವು
ಕಲ್ಲನು ಮಣ್ಣನು ಉಂಬಿರಿ ನೀವು.
ಜಾಣರ ಮತವೇ ಒಡೆದಿಹ ಮಡಕೆ !
ಜಾಣರ ಜಾತಿಯೆ ಬಿಚ್ಚಿದ ಪೊರಕೆ !

ಮೋಕ್ಷಾಮೃತವದು ತುಂಬುವುದುಂಟೆ ?
ಕರ್ಮದ ಕಸವನು ಗುಡಿಸುವುದುಂಟೆ ?
ಧ್ಯಾನಿಸಿ ಮನದಲಿ ಸಾಧಿಸಿ ತಿಳಿದರು
ಉತ್ತಮ ತತ್ವವ ಹಿಂದಿನ ಜನರು
ಇಸ್ಲಾಂ ತತ್ವವ ಬಿತ್ತಿದರವರು
ನಿಜದಲಿ ಬೆರೆಯುತ ಮುಕ್ತಿಯ ಪಡೆದರು
ತಿಳಿವನು ಜಗಕೆಲ್ಲಾ ಹರಡಿದರು.
ಕತ್ತಲೆಗೂಡಿದ ದೇಗುಲದಲ್ಲಿ
ಗೊಬ್ಬರ ತುಂಬಿದ ಕಗ್ಗವಿಯಲ್ಲಿ
ಕೊರಳನು ಬಿಗಿಯುವ ಸೆರೆಮನೆಯಲ್ಲಿ
ಮನಸಿನ ಕತ್ತಲೆ ಹರಿಯುವುದೆಲ್ಲಿ ?
ಉನ್ನತ ಭಾವಗಳೇರುವುದೆಲ್ಲಿ ?
ನೆಲಸಮ ಮಾಡಿರಿ ಕತ್ತಲೆ ಗೂಡನು
ಜಗಳವ ಬೆಳಸುವ ಭೇದದ ಬೀಡನು
ಕೂಡಲೆ ಹರಿವುದು ಬೆಳಕಿನ ಕಡಲು
ದಾಹವ ನೀಗುವ ಮುಕ್ತಿಯ ಕಡಲು
ವಿಶ್ವವ ಬೆಳಗುವ ದಿವ್ಯ ಜ್ಯೋತಿ
ಐಕ್ಯದ ಮಾರ್ಗವ ಬೆಳಗುವ ದೀಪ್ತಿ ;
ಒಂದೇ ಜಾತಿಯು ಒಂದೇ ಮತವು
ಶಕ್ತಿಯ ಗಳಿಸುವ ನಚ್ಚಿನ ಮತವು ;
ಒಂದೇ ದೇವರ ಮಕ್ಕಳು ನೀವು
ಸೋದರಭಾವದಿ ಕಲೆವುದು ನೀವು ;
ಸೈತಾನ್ ಮಾಡಿದ ಮೋಸವ ತಿಳಿಯಿರಿ
ಒಟ್ಟಿಗೆ ಬದುಕುವ ಬುದ್ಧಿಯ ತಳೆಯಿರಿ
ಒಟ್ಟಿಗೆ ಕಲೆತರೆ ತುರುಕರು ನೀವು

ಮೋಕ್ಷವ ಪಡೆಯುವ ವೀರರು ನೀವು
ಬಿಡಿ ಬಿಡಿ ನಿಂತರೆ ತುರು, ಕರು, ನೀವು
ಸೈತಾನ್ ಹುಲಿಗಳ ಬಾಯಿಗೆ ನೀವು ''
ಎಂದೀ ಪರಿಯಲಿ ತತ್ವಜ್ಞಾನಿ
ನುಡಿಯಲು, ಕೇಳಿದ ಮಹದಭಿಮಾನಿ
ನ್ಯಾಯಾಧೀಶನು ಖಾತಿಯಲಾಗ
'' ವರ್ಷದ ಶಿಕ್ಷೆಯ ಕೊಟ್ಟಿಹೆನೀಗ
ಶಾಂತಿಯ ರಕ್ಷಣೆ ಮಾಡಲೆ ಬೇಕು
ಕ್ರಾಂತಿಯ ಮೊಳಕೆಯ ತುಳಿಯಲೆ ಬೇಕು
ಜೈಲಲ್ಲಿದ್ದರೆ ಹುಚ್ಚಿಳಿಯುವುದು
ಕುದಿಯುವ ಮೆದುಳದು ತಂಪಾಗುವುದು''
ಎಂದಾಡುತ ಮುಂದಕೆ ತೆರಳಿದನು
ತತ್ವಜ್ಞಾನಿಯು ನಗೆಸೂಸಿದನು.

ಆದುದು ತತ್ವಜ್ಞಾನಿಗೆ ಶಿಕ್ಷೆ
ಶಾಂತಿಯ ಬದುಕಿಗೆ ಕಟ್ಟಿದ ರಕ್ಷೆ.
ಅವನನು ತಂದರು ಜೈಲಿನ ಮನೆಗೆ
ಜಿಗಿದರು ಬೀಗವ ಕಿರುಬಾಗಿಲಿಗೆ.
ಹಿಗ್ಗಿದ ಜನರೊಡನೆಯೆ ಕುಗ್ಗಿದರು
ಕಣ್ಣೀರಿಕ್ಕುತ ಮನೆ ಸೇರಿದರು.

ನ್ಯಾಯಾಧೀಶನು ಮಲಗುವ ಮನೆಯಲಿ
ನಿದ್ದೆಯ ಮಾಡುತ ಸಟ್ಟಿರುಳಿನಲಿ
ಬೆಚ್ಚುತ ಬೆದರುತ ಕಂಪಿಸುತಾಗ
ನೀನಾರೆನ್ನುತ ಕೂಗಿದನಾಗ

"ಕಲ್ಲಿನ ಗೋಡೆಯು ಕಬ್ಬಿಣ ಬಾಗಿಲು
ವಿರಾರಿಹೆಯೆಂತೋ ಕಟ್ಟಿನ ಕಾವಲು!"
ತತ್ವಜ್ಞಾನಿಯು ನಸುನಗುತೆಂದನು
"ನಾನೇ ಬಂದಿಹೆ ಅಂಜಿಕೆಯೇನು?
ಅಂಗೈ ಹಣ್ಣಿಗೆ ಕನ್ನಡಿಯುಂಟೆ?
ಕ್ರಾಂತಿಯ ಉದ್ಗಮ ತಡೆಯುವರುಂಟೆ?
ಕಾಲಜ್ಞಾನಿಗೆ ಗೋಡೆಗಳುಂಟೆ?"
ಎಂದಾ ಕಿಟಿಕಿಯ ಬಾಗಿಲು ತೆರೆದನು
ನಸುನಗುತಲ್ಲಿಂ ಮೆಲ್ಲಗೆ ನಡೆದನು.
ತತ್ವಜ್ಞಾನಿಯು ಜೈಲಲ್ಲಿರುವನು
ಊರಲ್ಲಿರುವನು ನಾಡಲ್ಲಿರುವನು
ಮನೆ ಮನೆಯಲ್ಲೂ ಅವನೇ ಇರುವನು
ದೇಶದ ತುಂಬಾ ಅವನೇ ಇರುವನು.
ಸತ್ಯವ ತಡೆಯುವ ಗೋಡೆಗಳುಂಟೆ?
ಜ್ಞಾನಿಯ ತಡೆಯುವ ಸರಳುಗಳುಂಟೆ?

---

## ಬೂಟಾಟಿಕೆ

ನಾವು ಬಡಜೀವಿಗಳು ನೀವು ಮಾತಪಸಿಗಳು
ದೃಷ್ಟವನು ತೋರಿರಯ್ಯ ;
ಕಣ್ಕಟ್ಟು ಮಾಯೆಯೋ ಸೃಷ್ಟಿ ಸಾಮರ್ಥ್ಯವೋ
ಒಂದನ್ನು ತೋರಿರಯ್ಯ.

ಹಿರಿಯ ಮರಗಳನಾಳ್ವ ಯತಿವರರು ಕೆಲರುಂಟು
ಡಂಬದಲಿ ಮೆರೆವರುಂಟು ;
ಉಪವಾಸ ನಿಯಮದಲಿ ಜಗವ ಜಯಿಸುವರುಂಟು
ಒಳಬೆಳಗ ಕಾಣ್ಬರುಂಟು.

ಗುಹೆಯಲ್ಲಿ ಅಡಗಿರ್ದು ವರ್ಷಗಳ ಕಳೆದಾಯ್ತು
ಹಿರಿಯ ರಿಸಿ ಎಂಬುದಾಯ್ತು ;
ದಿಕ್ಕು ದಿಕ್ಕುಗಳಿಂದ ನೋಡಹೋಗುವರಾಯ್ತು
ಜಗವೆಲ್ಲ ಕೀರ್ತಿಯಾಯ್ತು.

ಏನು ಫಲವಾಯ್ತೆಂದು ಪಾಮರರು ಕೇಳುವೆವು
ತಿಳಿವನ್ನು ನೀಡಿರಯ್ಯ ;
ಜ್ಞಾನ ಭಕ್ತಿಯುಮಿಲ್ಲ, ಮೂಢ ಭಕ್ತಿಯುಮಿಲ್ಲ
ಕಳವಳಕೆ ಸಿಕ್ಕೆವಯ್ಯ.

## ಕವಿಯ ಸೋಲು

ಭಕ್ತಿಯಿಂ ಸಾಧಿಸಿದ ಪೊಸ ಬಗೆಯ ಶಕ್ತಿಯಿಂ
ನಂಬುಗೆಯ ನೀಡಿರಯ್ಯ;
ಯೋಗದಿಂ ಗಳಿಸಿರುವ ದಿವ್ಯತರ ಶಕ್ತಿಯಿಂ
ಮೆರೆದೆಮ್ಮ ಸಲಹಿರಯ್ಯ.

ಕೌಶಿಕನ ಶಸ್ತ್ರಾಸ್ತ್ರಜಾಲಮಂ ವಾಸಿಷ್ಠ
ದಂಡವದು ನುಂಗಿತೆಂದು
ಹಿಂದಾದ ದೃಷ್ಟಗಳ ನಾವೆಲ್ಲ ಕೇಳಿಹೆವು
ಇಂದೇನು ಕಾಣೆವಯ್ಯ.

ಆಕಾಶಯಾನವಂ ಸುಟ್ಟು ಬಟ್ಟಿಡಬಹುದು
ಜಹಜುಗಳಸದ್ದಬಹುದು
ಘೀಳಿಡುವ ಅಶನಿಗಳ ಬಾಯಿಮುಚ್ಚಿಸಬಹುದು
ಕತ್ತಿಗಳ ಮುರಿಸಬಹುದು.

ಕಲ್ಲನ್ನು ಜನರಾಗಿ ಜನರನ್ನು ಕಲ್ಲಾಗಿ
ಮಾರ್ಪಡಿಸಿ ತೋರಬಹುದು
ಏಕ ಕಾಲದಿ ನೀವು ಹಲವು ಕಡೆ ಕಾಣುತ್ತ
ಭೀತಿಯಂ ಬೀರಬಹುದು.

ಸತ್ತವರನೆಬ್ಬಿಸಲು ಬದುಕುವರ ಸಾಯಿಸಲು
ನೋಡಿ ನಂಬುವೆವಯ್ಯ,
ಮೂಢಮತಿಗಳು ನಾವು, ಬಡಜೀವಿಗಳು ನಾವು
ನಂಬುಗೆಯು ಸಾಲದಯ್ಯ.

## ಕವಿಯ ಸೋಲು

ನಮ್ಮಂತೆ ನೀವಿರಲು ನಿಸ್ಸತ್ವರಾಗಿರಲು
    ಸೆರೆಯಲ್ಲಿ ಕೊಳೆಯುತಿರಲು
ನ್ಯಾಯದಲಿ ಧರ್ಮದಲಿ ದೈವದಲಿ ಯೋಗದಲಿ
    ನಂಬುಗೆಯು ಬಾರದಯ್ಯ.

ಶುಷ್ಕ ವೇದಾಂತಕ್ಕೆ ಮಾತಿನಾ ಜಗಳಕ್ಕೆ
    ಜೀವಗಳ ತೆತ್ತರೇಕೊ?
ಯುಗಪುರುಷರವತಾರ ಬರಿಹೊಟ್ಟೆ ನಾಡಿನಲಿ
    ಅಡಿಗಡಿಗೆ ಮಾಡಲೇಕೊ?

ರಾಮಕೃಷ್ಣರು ಬೇಡ ಘೋಷ ಗೀಷರು ಬೇಡ
    ಬಂದ ಫಲ ಕಂಡೆವಯ್ಯ
ಇಂದ್ರಜಾಲಿಗನೊಬ್ಬ ನಮಗಿಂದು ಬೇಕಯ್ಯ
    ಅವನೆಮಗೆ ದೇವರಯ್ಯ.

---

# ಏಕಾಗಬಾರದು?

ಮೇರುಗಿರಿಯೊಂದು ದಿನ ಗರ್ವದಿಂ ತಲೆಯೆತ್ತಿ
ಕೆಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯಿತ್ತು
"ಈರೇಳು ಲೋಕಗಳಿಗಾಧಾರವಾಗಿಹೆನು,
ಎಲ್ಲವಂ ಧರಿಸಿಹೆನು; ಸೂರ್ಯತಾರೆಗಳೆನ್ನ
ಬಳಿವಿಡಿದು ಸಂಚರಿಸಿ ನಾನಿಟ್ಟ ಶಾಸನವ
ಎಳ್ಳನಿತು ಲಂಘಿಸವು". ಈ ಕೆಚ್ಚುನುಡಿಗೇಳಿ
ಸಾಗರದ ವಾರಿರಾಶಿಯುಲೊಂದು ಹನಿಯೆದ್ದು
"ಎಲೆ ಮೇರುಪರ್ವತವೆ! ಹದಿನಾಲ್ಕು ಲೋಕಗಳ
ಆಧಾರಗೀಧಾರವೆಂಬ ನುಡಿಯಂತಿರಲಿ
ಮುನಿದೆನಾದರೆ ಕೊಚ್ಚಿ ಮುಳುಗಿಸುವೆ ಹೆಸರುಸಿರು
ನಿನಗಿಲ್ಲವೆಂಬಂತೆ, ತಿಳಿಯದೇಂ ಪೌರುಷವು?"
ಎಂದು ತನ್ನಯ ಬಲುಮೆ ಮಹಿಮೆಗಳನಾಡಿತ್ತು.
ಸೈಕತದ ರಾಶಿಯುಲಿ ಒಂದು ಕಣ ತಾನೆದ್ದು
"ಲೇಸಾಯ್ತು ನಿನ್ನ ನುಡಿ! ಮುಸಿಯದೆಯೆ ವಿಸ್ತಾರ
ಸಾಗರದ ಹನಿಗಿನಿಯುಮೇನುಮುಂ ಇರದಂತೆ
ಕುಡಿಯುವೆನು, ಪೈಜೆಯಿದೆ ಹೂಡು ನೀಂ ಪಂಥವನು"
ಎಂದಾಗ ಸಾಮರ್ಥ್ಯದುನ್ನತಿಯನಾಡಿತ್ತು.
ಪಂಥಗಳ ಪೌರುಷಕೆ ಮನುಜ ಕೋಟಿಯು ನಕ್ಕು
"ಈ ಹುಚ್ಚು ಬಲು ಸೊಗಸು, ಕೇಳ್ವರಿಗೆ ಬಲು ಸೊಗಃ
ಹೆಡ್ಡರಿಗೆ ಹುಚ್ಚು ಹಿಡಿದರೆ ಮಾತು ಸೊಗಸುಂಟು"
ಎಂದವರನೇಳಿಸಿತು. ಆಗ ನಿರ್ದೇಹದಲಿ
ಏಕಾಗಬಾರದೆಂದೊಂದು ದನಿ ನಭದಲ್ಲಿ
ನುಣ್ಣನೆಯ ಸಣ್ಣ ದನಿ ಗೀತವಮಂ ಹಾಡಿತ್ತು.

## ಕವಿಯ ಸೋಲು

" ಏಕಾಗಬಾರದದು
ಆಗಲೇ ಆಗುವುದು
ಹನಿಯ ನುಡಿ ಕಣದ ನುಡಿ
ದಿಟದ ನುಡಿಯೆನಗೊಪ್ಪು
ಸಕ್ಕ ಮಾನವರೆಲ್ಲ
ಅತ್ತು ಹೋಗುವರೀಗ
ಕಣದಲ್ಲಿ ಹನಿಯಲ್ಲಿ
ಇರುವೊಂದು ಪರಮಾಣು
ಕೊಚ್ಚಿ ಬಿಸುಡುವುದೀಗ
ಕುಡಿದು ತೇಗುವುದೀಗ
ಆ ಕಾಲ ಬಂದಿಹುದು
ಈಗಲೇ ಬಂದಿಹುದು.
ಕಣದಂತೆ ಹನಿಯಂತೆ
ತಿಳಿದು ಸಾಧಿಪ ಜನರು
ಎನ್ನೊಳಗೆ ತಪ್ಪದೆಯೆ
ಸಮರಸವ ಹೊಂದುವರು
ಲೋಕಗಳ ಸೃಷ್ಟಿಪರು
ಲೋಕಗಳನಾಳುವರು
ಲೋಕಗಳ ನುಂಗುವರು
ಏಕಾಗಬಾರದದು
ಆಗಲೇ ಆಗುವುದು."

---

## ದೇವಯಾನಿ

ಮರದ ನೆಳಲ ತಂಪಿನಲ್ಲಿ
ಮೆಲ್ಲ ಮೆಲ್ಲನೇರುತಾ
ಗಿರಿಯ ಕಳೆದು ಸಂಜೆಯಲ್ಲಿ
ಕಚನ ಮನದಿ ಒಯುಸುತಾ

ನಡೆದಳವಳು ದೇವಯಾನಿ
ಪ್ರಣಯ ಭರದಿ ಕುಗ್ಗುತಾ
ಬಿನದ ಬನದ ನಡುವೆ ನಿಂದು
ಕಣ್ಣನೀರು ಸುರಿಸುತಾ

ಸಂಜೆಗೆಂಪ ತಳಿರುಗೆಂಪ
ತುಟಿಯ ಕೆಂಪು ವಿಾರಲು
ಅಲರ ಕಂಪ ಎಲರ ಕಂಪ
ಉಸಿರು ಕಂಪು ಜರಿಯಲು

ತಂಪಿನೆಲರು ಕಂಪಿನೆಲರು
ಮುಂಗುರುಳನು ತಿದ್ದಲು
ಮನದಿ ಪೊಸತು ರಾಗವೇರಿ
ಸುಖಕೆ ಪುಳಕವೇರಲು

## ಕವಿಯ ಸೋಲು

ನಡೆದಳೆಂದು ನಿಂದಳೆಂದು
ಬೆಚ್ಚನುಸಿರು ಸುಯ್ಯುತಾ
ಕಚನ ನೆನೆದು ನೆನೆದು ಮನದಿ
ವಿರಹದುರಿಯ ತಾಳುತಾ

ಮೆಲ್ಲನೊಂದು ಮುಗಿಲು ಬಂದು
ತನ್ನ ತೋಳಲಪ್ಪಲು
ನಲ್ಲನೆಂದು ದೇವಯಾನಿ
ಹರುಷದಿಂದ ನಿಂದಳು

ಎಳೆಯ ತಳಿರು ಹೊಳೆವ ತಳಿರು
ನುಣ್ಗದಪನು ಚುಂಬಿಸೆ
ಸುಖದ ಭಾವ ಸುಗ್ಗದೋರಿ
ತಳಿರು ಮುಖದಿ ಬಿಂಬಿಸೆ

ನಡೆದು ಬಳಲಿ ಮರವ ನೆಮ್ಮಿ
ಬನದ ನಡುವೆ ನಿಂದಳು
ಕಚನ ಬರವನೆದುರುನೋಡಿ
ದೃಷ್ಟಿ ದೂರ ನೆಟ್ಟಳು

ಸುಖವು ದುಃಖವೊಂದೆ ಕಾಲ
ದಲ್ಲಿ ಮನದಿ ಮೂಡಲು
ನೋಡಿ ಹಿಗ್ಗಿ ಸುಯ್ದು ತಗ್ಗಿ
ಕಚನ ಕಡೆಗೆ ನಡೆದಳು.

## ಕವಿಯ ಸೋಲು

ಕಚನ ಬಳಿಗೆ ಬಂದು ನಿಂದು
ನಲ್ಮೆ ಕೋಡಿವರಿಯಲು,
ಮುಖವನೆತ್ತಿ ನೋಡಿ ನಾಚಿ
ಮೆಲ್ಲನಿಂತು ನುಡಿದಳು

"ಇಳಿಸು ಹೊರೆಯ ನಿನ್ನ ಹೊರೆಯ
ಎನ್ನ ಮನದ ಹೊರೆಯನು
ದೈತ್ಯರೊಡನೆ ಸೇರಿ ಸೇರಿ
ತಂದೆ ಕಠಿನನಾದನು.

ಇಳಿಸು ಹೊರೆಯ ದೂರವಿಲ್ಲ
ನಾನೆ ಹೊತ್ತು ತರುವೆನು
ನಲ್ಮೆ ನುಡಿಯನಾಡಿ ಪಾಡಿ
ನಿನ್ನ ದಣಿವ ಕಳೆವೆನು."

ಕಚನು ನಿಂದು ಹೊರೆಯನಿಳಿಸಿ
ನುಡಿದ ದೇವಯಾನಿಯಂ
"ತಾಯೆ! ನಿನ್ನ ಒಲುಮೆ ಹೆಚ್ಚು
ಇಲ್ಲಿಗೇಕೆ ಬಂದೆಯೌ

ಏಕೆ ಬಂದೆ ತಾಯೆ ನೀನು
ಮನೆಯ ಬಿಟ್ಟು ಕಾಡಿಗೆ
ಕಲ್ಲುಮುಳ್ಳು ಇರುವ ದಾರಿ
ತುಳಿದು ಬಂದೆಯಡವಿಗೆ.

## ಕವಿಯ ಸೋಲು

ಕಣ್ಣನೀರು ಸುರಿವುದೇಕೆ
ಮನದಿ ದುಃಖವೇತಕೌ
ಆವ ಕಜ್ಜ ನಿನ್ನನೀಗ
ಕಾಡಿಗಲ್ಲಿ ತಂದಿತೌ."

'ತಾಯೆ' ಮಾತು ಕಿವಿಗೆ ಶೂಲ
ಕಾದ ಸೀಸವಾಗಲು
"ಏನು ಮಾತು ಕಲಿತೆ ನೀನು
ಏನು ಮಾತು!" ಎಂದಳು.

"ಏನು ಕಲಿತರೇನು ಫಲವು
ದೇವಗುರುವ ಪುತ್ರನು
ಕಲಿಯಲಿಲ್ಲ ನಲ್ಮೆವಾತು
ದೇವಯಾನಿ ಕಲಿಪಳು

ಎಳೆಯ ಗರುಕೆ ಸೊಂಪುಪಾಸು
ಮೇಲೆ ತಳಿರು ತೋರಣ
ಸಂಜೆಗೆಂಪಿನಾರತಿಯಲಿ
ನಲ್ಮೆವಾತು ಕಲಿಪಳು.

ಪ್ರಿಯಳು ಓಪಳೆಂಬ ಮಾತು
ನಿನ್ನ ಲೋಕದಿಲ್ಲವೆ?
ಚನ್ನೆ ರನ್ನೆ ಎಂಬ ಮಾತು
ಅಲ್ಲಿ ನುಡಿವರಿಲ್ಲವೆ?

## ಕವಿಯ ಸೋಲು

ಏನು ಲೋಕ ದೇವಲೋಕ!
  ಹಿಗ್ಗಿ ಎಲ್ಲ ನುಡಿವರು
ಒಳ್ಳೆ ಮಾತು ಸಲ್ಮೆವಾತು
  ನುಡಿವ ಜಾಣರಿಲ್ಲವು.

ಬಹಳ ದೂರ ನಡೆದು ಬಂದು
  ನಿನ್ನ ಕಾಲು ನೋವುದು
ಕಾಲನೊತ್ತಿ ನೋವು ತೆಗೆದು
  ನಲ್ಮೆವಾತು ಕಲಿಪೆನು.''

ಎಂದು ನುಡಿದು ದೇವಯಾನಿ
  ಕಚನ ಮುಖವ ನೋಡಲು
ಮೃದು ಮೃಣಾಳ ಬಾಹುವಿಂದ
  ಅವನ ಭುಜವ ಸೋಕಲು.

ಕಚನು ಸರಿದು ನುಡಿದ '' ತಾಯೆ!
  ಕಾಲುಗೀಲು ನೋಯದು.
ಕಾಡುಮೇಡು ತಿರುಗಿ ತಿರುಗಿ
  ದಿನವು ಬಳಕೆಯುಂಟದು.''

'' ನಿನ್ನ ನೋವು ನಿನಗೆ ಅರಿದು
  ನಾನು ಜಾಣೆ ಅರಿವೆನು.
ನಲ್ಮೆ ಕಣ್ಗೆ ಕಾಂಬುದೆಲ್ಲ
  ಬರಿಯ ಕಣ್ಗೆ ಕಾಣದು.''

## ಕವಿಯು ಸೋಲು

ಎಂದು ನುಡಿಯೆ ದೇವಯಾನಿ
ಕಚನು ಹೊತ್ತು ನೋಡುತ
ನುಡಿದನೊಡನೆ "ನೋಡು ತಾಯೆ,
ಬಂತು ಕಪ್ಪು ಕವಿಯುತ

ಗುರುವು ಕರೆವ ಹೊತ್ತು ಬಂತು
ಮೂಡಿ ಬರುವ ಚಂದ್ರನು
ಹೊತ್ತುವಿಾರಿ ಹೋದರಲ್ಲಿ
ಗುರುವು ಕೋಪಗೊಂಬನು."

"ಎನ್ನಲಿಹುದು ಗುರುವ ಹರಣ
ಮಗಳ ಸುಖವ ಬಯಸುವ
ಎನ್ನ ನಿನ್ನ ಇಲ್ಲಿ ನೋಡೆ
ಮೆಚ್ಚಿಮಿಕ್ಕಿ ಹರಸುವ.

ನಿನ್ನನೊಂದು ಕೇಳಲೆಂದು
ಮನವು ತವಕಗೊಳ್ಳುವುದು
ಇತ್ತ ನೋಡಿ ನಾಚದೆನಗೆ
ಮಾರುನುಡಿಯ ಕೊಡುವುದು.

ದೇವಲೋಕದಿರುವರಂತೆ
ರಂಭೆ ಮೇನಕಾದ್ಯರು
ತಮ್ಮ ಚೆಲುವು ಮಿಗಿಲದೆಂದು
ಗರ್ವದಿಂದ ನುಡಿವರು.

ಕವಿಯ ಸೋಲು

ನೀನು ನೋಡಿಯಿರುವುದುಂಟೆ
ಅವರ ರೂಪು ಬೆಡಗನು
ಇಂಥ ಚೆಲುವು ಅವರಲುಂಟೆ
ಕಿವಿಯೊಳುಸಿರು ಕೇಳ್ವೆನು.''

ಎಂದು ನುಡಿದು ದೇವಯಾನಿ
ಕಚನ ಕರವ ಹಿಡಿಯಲು
ಬಿಡಿಸಿಕೊಂಡು ಸರಿದು ದೂರ
ಮೆಲ್ಲನಿಂತು ನುಡಿದನು.

''ಓದು ಕಲಿವ ಹುಡುಗ ನಾನು
ರಂಭೆ ಗಿಂಭೆ ತಿಳಿಯೆನು ;
ಚೆಲುವು ಗಿಲುವು ಎಂದರೇನೊ
ಗುರುವು ತಿಳಿಸಲಿಲ್ಲವು.''

''ಆರು ಬಂದು ತಿಳಿಸಲೇಕೆ
ಕಣ್ಗೆ ಚೆಲುವು ರೂಪನು
ವರುಷ ವರುಷ ತುಂಬಿ ಬರಲು
ತನಗೆತಾನೆ ತಿಳಿವುದು.

ದಿನಕೆ ದಿನಕೆ ತಿಳಿವು ತುಂಬಿ
ವಿಶಾನಗಣ್ಣು ಚಲಿಪುದು,
ಚೆಲುವು ಬಲೆಯ ಕಣ್ಣಿನಲ್ಲಿ
ಸಿಕ್ಕಿ ಚಲಿಸದಿರುವುದು.

**ಕವಿಯ ಸೋಲು**

ನಿನ್ನ ಹಡೆದ ತಾಯಿ ತಂದೆ
ಏನು ನೋಂಪಿ ನೋಂತರೊ
ಇನಿತು ಸುಗುಣ ಇನಿತು ರೂಪು
ನಿನ್ನೊಳೆಂತು ಸೇರಿತೊ!

ನಿನ್ನ ನೆಪದಿ ಮನದಲೊಂದು
ಕಿಚ್ಚು ಉರಿಯುತಿರುವುದು
ನಿನ್ನ ಬಿಟ್ಟು ಜೀವವಿರದು
ನೀನೆ ಪೊರೆಯಬೇಹುದು.

ನಿನ್ನ ಕೊರಳ ಹಾರ ಪದಕ
ಎನ್ನ ನೀನು ಧರಿಪುದು,
ನಿನ್ನ ಮಡದಿ ರನ್ನೆಯೆಂದು
ದೇವಲೋಕಕೊಯ್ವುದು.

ನಾನು ನೀನು ಮದುವೆಯಾಗೆ
ಗುರುಗಳವರು ಬೀಗರು.
ದೈತ್ಯ ಗುರುವು ದೇವ ಗುರುವು
ಸೇರಿ ಸಂಧಿಮಾಳ್ಪರು.

ಇಂದಿನಿಂದ ಕಲಹವಿಲ್ಲ
ದೇವ ದೈತ್ಯ ಜಾತಿಗೆ,
ಮುಂದೆ ಅಣ್ಣ ತಮ್ಮ ಎಂದು
ಪ್ರೇಮದಿಂದ ಸೇರುಗೆ.''

ಇಂತು ನುಡಿಯೆ ದೇವಯಾನಿ
  ಕಚನು ಎದ್ದು ನಿಂದನು.
'' ಏಳು ತಾಯೆ, ಗುರು ಕುಮಾರಿ
  ನಿನಗೆ ಕೈಯ ಮುಗಿವೆನು.

ಧರ್ಮವನ್ನು ನೀನು ಬಲ್ಲೆ
  ಗುರುವು ಎನಗೆ ಪಿತನಲೆ
ಪಿತನ ಮಗಳು ಎನ್ನ ತಂಗಿ
  ಜಾಣೆ ನೀನು ತಿಳಿಯದೆ.''

ಎನಲು ಕಚನು, ದೇವಯಾನಿ
  ಕಣ್ಣನೀರು ಸುರಿದಳು
'' ಜಾಣತನದ ಮಾತು ಬೇಡ
  ಧರ್ಮವನ್ನು ಬಲ್ಲೆನು.

ಹೆಣ್ಣು ಕೊಟ್ಟ ಮಾವನೊಬ್ಬ
  ತಂದೆಯೆಂಬರಲ್ಲವೆ
ತಂದೆಯೆಂದರರ್ಥವೇನು
  ಜಾಣ ನಿನಗೆ ತಿಳಿಯದೆ.

ನೀನೆ ಎನ್ನ ಜೀವಮಣಿಯು
  ನೀನೆ ಎನ್ನ ದೈವವು
ಕಂಡ ದಿನವೆ ಮನದಿ ವರಿಸಿ
  ನೀನೆ ಪತಿಯದೆಂದೆನು.

**ಕವಿಯ ಸೋಲು**

ಎನ್ನ ಬಿಟ್ಟು ನೀನು ಪೋಗೆ
  ವಿಷವ ಕುಡಿದು ಸಾವೆನೊ
ವಿರಹದುರಿಯ ತಾಳದೀಗ
  ಕಮರಿ ಬಿದ್ದು ಸಾವೆನೊ ''

ಎಂದು ನುಡಿದು ದೇವಯಾನಿ
  ಬಿಕ್ಕಿ ಅಳುತ ನಿಲ್ಲಲು
ದೈತ್ಯ ಗುರುವು ಎತ್ತಲಿಂದೊ
  ಅಲ್ಲಿ ಬಂದು ನಿಲ್ಲಲು

ಕಚನು ನೋಡಿ ದೂರ ಸರಿದು
  ಭಯದಿ ಕೈಯ ಮುಗಿದನು
ತಾನು ನಿರಪರಾಧಿಯೆಂದು
  ದೃಷ್ಟಿಯಲ್ಲೆ ನುಡಿದನು.

ಒಮ್ಮೆ ಮಗಳ ಒಮ್ಮೆ ಕಚನ
  ಗುರುವು ನೋಡಿ ನಿಂದನು,
ತಪದ ಬಲುಮೆ ಮನದ ಒಲುಮೆ
  ತೂಗಿ ತೂಗಿ ಸುಯ್ದನು.

ದೇವ ಜಾತಿ ದೈತ್ಯ ಜಾತಿ
  ಋಷಿಗಳೆಂಬುದಿಲ್ಲವು
ಹೆಣ್ಣು ಹಡೆದು ಕರಗದಿರುವ
  ತಂದೆತಾಯಿಯಿಲ್ಲವು.

**ಕವಿಯ ಸೋಲು**

ತನ್ನ ಹೃದಯ ಕರಗೆ ನೋಡಿ
ಮಗಳ ಮುಖದ ದೈನ್ಯವಂ
ಕಚನ ಕೈಯಲಿಟ್ಟ ಗುರುವು
ಮಗಳ ಕರಸರೋಜವಂ.

"ಮೆಲ್ಲನಿವಳ ಕರೆದು ತಾರ
ಎನ್ನ ಮುದ್ದು ಮಗಳನು
ಇವಳ ಸುಖದಿ ಪೊರೆವ ಭಾರ
ನಿನಗೆ ವಹಿಸಿಕೊಟ್ಟೆನು."

ಎಂದು ಗುರುವು ಮುಂದೆ ನಡೆಯೆ
ಕೋಕಿಲೊಂದು ಮಂತ್ರ ಪಾಡೆ
ತಾರೆ ಹೂವನೆರಚಿ ಚಂದ್ರ
ಅಮೃತವರ್ಷ ಕರೆದನು.

"ದೇವಯಾನಿ ಪುಣ್ಯಶಾಲಿ
ಬಹಳ ಕಾಲ ಸುಖದಿ ಇರಲಿ"
ಎಂದು ಹರಸಿ ಶುಕಮಹರ್ಷಿ
ನಗುತ ತಪಕೆ ನಡೆದನು.

---

## ಯಾರು ಹೆಚ್ಚು?

ಕಲ್ಲು ತಂದು ರೂಪುಮಾಡಿ
ದೇವನೆಂದು ಕರೆದು ನಿನ್ನ
ಎಲ್ಲ ಜಗದ ಒಡೆಯನಾಗಿ
ಕಾವುದೆಂದೆನು.

ಮೆಯ್ಯ ತೊಳೆದು ಹಾಲನೆರೆದು
ಹೂವು ಮುಡಿಸಿ ಗಂಧವಿಕ್ಕಿ
ತುಯ್ಯಲಿಟ್ಟು ದೀಪವಿಟ್ಟು
"ದೇವ" ಎಂದೆನು.

ನಾನು ಮಾಡೆ ನೀನು ಆದೆ
ನಾನು ಕಟ್ಟೆ ನಿನಗೆ ಗುಡಿಯು
ನಾನು ಒರೆಯೆ ನಿನಗೆ ತುತಿಯು
ನಾನೆ ಹಿರಿಯನು.

ಮರುಳನಂತೆ ಹಾಡಿ ಹಿಂದೆ
ಹಿರಿಯತನವ ಹೇರಿ ನಿನಗೆ
ಗರುವದೇವನೆಂದು ಕರೆದು
ಬಿರುದ ಹೊರಿಸಿದೆ.

## ಕವಿಯ ಸೋಲು

ಇನಿತು ಕೃತಿಗಳೆನ್ನದಿರಲು
ಪುಣ್ಯ ಪಾಪ ಎಂಬ ಭಾರ
ಕರ್ಮ ಗಿರ್ಮ ಎಂಬ ಬಲೆಯು
ನೀನು ಹಾಕಿದೆ.

ನಾನು ತಗ್ಗಿ ತಗ್ಗಿ ನಡೆಯೆ
ನೀನು ಬೀಗಿ ಬೀಗಿ ಮೆರೆವೆ
ಮಾನವಿಲ್ಲ ನಿನಗೆ, ನೀನೆ
ಜಗದಿ ಭಂಡನು.

ದೇವನೆಂದು ನಿನ್ನ ಮಾಡಿ
ಜೀವದುಸಿರು ನಿನಗೆ ಕೊಟ್ಟು
ಸಾವುದಾಯ್ತು, ಎನ್ನ ಭೂತ
ಎನ್ನ ತಿಂದಿತು.

ನಿನ್ನ ಗುಡಿಯು ನಿನ್ನ ಮೂರ್ತಿ
ಕಲ್ಲು ಗುಡಿಯು ಕಲ್ಲು ಮೂರ್ತಿ
ಭಿನ್ನವಾಗೆ ನೊಂದು ನಾನು
ಅತ್ತು ಮರುಗುವೆ.

ಎಲ್ಲ ಜನರ ಹೃದಯದಲ್ಲಿ
ನೆಲಸಿಯುವರ ಕಷ್ಟ ದುಃಖ
ನೋಡಿ ನೋಡಿ ಕರಗದಿರುವೆ
ಕಟುಕನಲ್ಲವೆ?

## ಕವಿಯ ಸೋಲು

ಮಾಯೆಯೆಂಬ ಬಲೆಯ ಬೀಸಿ
ಮನುಜ ಮೀನ ಹಿಡಿದು ತಿಂಬ
ಜಾಲಗಾರ ನಿಸಗದೆಂತು
ದಯೆಯುದಿಪ್ಪುದು.

ಹೊಲ್ಲೆತನವ ಪೆರ್ಮೆಯೆಂದು
ಎಲ್ಲ ಗುಣವ ಹೇಳಿಕೊಂಡು
ಕಳ್ಳನಂತೆ ಅಡಗಿಕೊಂಡು
ಕೈಗೆ ಸಿಕ್ಕದೆ,

ನೀಚತನಕೆ ನೀನೆ ಹೇಸಿ
ನಾಚಿಕೊಳುತ ಮುಖವ ಮರೆಸಿ
ಗೋಚರಿಸದೆ ತಿರುಗುತಿರುವೆ
ಲೋಕವರಿಯಲು.

ನಾಡನಾಳ್ವ ಸಾರ್ವಭೌಮ
ಬಿರುದು ಪಡೆದ ಚಕ್ರವರ್ತಿ
ಕಣ್ಗೆ ಕಾಂಬ ತೆರದಿ ನೀನು
ಕಾಣ ಬೇಡವೆ?

ರೂಪು ದೇಹ ಏನುಮಿಲ್ಲ
ಸೈಪು ಪಾಪ ಏನುಮಿಲ್ಲ
ಕಷ್ಟ ದುಃಖ ಅಂಟಲಿಲ್ಲ
ದೇವನೇತಕೆ?

ಕವಿಯ ಸೋಲು

ಸಹಜನೆಂದು ಹಿರಿಯನೆಂದು
ಪರಮನೆಂದು ದೇವನೆಂದು
ಕಹಳೆ ಕೊಂಬು ಇಡಿಸಿಕೊಂಬೆ
ತೋರು ನೀನೆಲೆ!

---

# ಎಲ್ಲಿಗೆ?

ಕಾಲವಾಹಿನಿಯಲ್ಲಿ ಸಿಕ್ಕಿ ನಾವೆಲ್ಲಿಗೋ
ತೆರಳುತಿಹ ಭೀತಿಯಿಹುದು ;
ಮೇಲ್ಮೇಲೆ ವಿಷವೀಚಿ ಮಾಲೆಗಳು ನುಗ್ಗುತ್ತ
ಬರುತಿಹವು ಕೊಚ್ಚುತಿಹವು.

ಕುರುಡಾದ ನಿಯಮವೊ ಕುಂಟಾದ ವಿಧಿಗಳೋ
ಈವರೆಗೆ ಪೊರೆದುವಯ್ಯ ;
ಹರಿದು ಹೋಗಿಹವೀಗ ರಕ್ಷಣೆಯ ಬಂಧಗಳು
ಕಾವುದನು ಕಾಣೆನಯ್ಯ.

ಬಂಡೆಗಳು ಏನಿಹವೊ ನೀರಸುಳಿಯೇನಿಹುದೊ
ಕತ್ತಲೆಯು ಮುತ್ತುತಿಹುದು;
ಕಂಡ ದಾರಿಯುಮಿಲ್ಲ ಹೇಳುವರು ಮೊದಲಿಲ್ಲ
ಎತ್ತಲುಂ ಜ್ಯೋತಿಯಿಲ್ಲ.

ಸುತ್ತಲುಂ ಉರಿದಾಹ ಜೀವನಕೆ ಬಡಿದಾಟ
ತಿಮಿತಿಮಿಂಗಿಲದ ನೋಟ
ಸಾತ್ವಿಕದ ರಾಜಸದ ಬುಗ್ಗೆಗಳು ತೋರಿಲ್ಲ
ಸಮತೆ ಸ್ಪೈರಣೆಗಳಿಲ್ಲ.

## ಕವಿಯ ಸೋಲು

ಹಿರಿಯರಲಿ ಗೌರವವು ದೈವದಲಿ ನಂಬಿಕೆಯು
ಹೆಸರಿಲ್ಲದಾಗುತಿಹವು ;
ದೊರೆಯೆಂಬ ಗುರುವೆಂಬ ಪೂಜ್ಯಭಾವಗಳೆಲ್ಲ
ಉಸಿರಿಡದೆ ಮೆತ್ತಗಿಹವು.

ಕಿರಿಯರಿಗೆ ಹಿರಿಯರಿಗೆ ನಾಡಲ್ಲಿ ಆರಿಗುಂ
ನಿಯಮಗಳ ಸಹನೆಯಿಲ್ಲ ;
ಸರಪಳಿಯ ಕಿತ್ತೆಸೆದ ಮದ್ದಾನೆಗಳ ಗುಂಪು
ನಯನೀತಿ ಗಣನೆಯಿಲ್ಲ.

ಎಲ್ಲರುಂ ಅರಿವಿಲ್ಲದೆಳಮಕ್ಕಳಂದದಲಿ
ಉರಿಯೊಡನೆ ಕುಣಿಯುತಿಹರು ;
ಎಲ್ಲಿಯುರಿ ಹತ್ತುವುದೊ ಹಡಗೆಲ್ಲಿ ಮುಗುಚುವುದೊ
ಪರಿಹರಿಸಿ ಕಾವರಾರು ?

ಹುಚ್ಚುಹೊಳೆಯನು ನೋಡಿ ವಿಷವಾಹಿನಿಯ ನೋಡಿ
ಬೆರಗುವಟ್ಟಿರುವೆವಯ್ಯ ;
ಎಚ್ಚರಿಕೆ ಕೊಡಲಿಂದು ಆವ ಬೆಳಕದು ಬಂದು
ಪೊರೆಯುವುದೊ ಕಾಣೆನಯ್ಯ.

---

## ಹಿರಿಯ ದಾನಿ

ಕುರುಡನೊಬ್ಬ ಕೋಲನೂರಿ
ಮರದ ಕೆಳಗೆ ನಿಂದಿರುತ್ತ
ಕರವ ನೀಡಿ ಬೇಡುತಿದ್ದ
ಪುರದ ಜನರನು.

" ಹುಟ್ಟುಕುರುಡ ಕಾಸನೀಡಿ
ಹೊಟ್ಟೆಗಿಲ್ಲ ದಯವ ತೋರಿ
ಬಟ್ಟೆಯೆಂಬುದರಿಯೆ " ಎಂದು
ಪಟ್ಟಣಿಗರನು.

ಬೇಡುತಿದ್ದ ದೈನ್ಯದಿಂದ
ಆಡುತಿದ್ದ ಶಿವನ ಮಾತ
" ಮಾಡಿರಯ್ಯ ಧರ್ಮವನ್ನು
ನೋಡಿ ಹೋಗದೆ."

ಬಂದರಲ್ಲಿ ಪುರದ ಜನರು
ಮಂದಿಯೆನಿತೊ ಲೆಕ್ಕವಿಲ್ಲ
ಒಂದು ಕಾಸು ಕೊಡದೆಯವಗೆ
ಮುಂದೆ ನಡೆದರು.

## ಕವಿಯ ಸೋಲು

ದೊಡ್ಡ ನಾಮ ದೊಡ್ಡ ಮುದ್ರೆ
ಅಡ್ಡಬೂದಿ ನಡೆದುವೆಷ್ಟೊ
ಗೊಡ್ಡು ತತ್ವ ಹೇಳಿಕೊಂಡು
ಜಡ್ಡು ಹಿಡಿದವು.

ಹಿರಿದು ಸರಿಗೆ ಹಿರಿದು ಪೇಟ
ಸರಿದು ನಡೆದ ಸಾಹುಕಾರ
ಕುರುಡನಾರೊ ತಿಳಿದು ಹೇಳಿ
ಅರಿಯ ಬಲ್ಲಡೆ.

ಚಲನ ಚಿತ್ರ ನೋಡಲೆಂದು
ಕಲೆಯ ತಿರುಳ ನೋಡಲೆಂದು
ಮಲಿನಮನರು ಹೋದರೆಷ್ಟೊ
ನಲಿಯುತಲ್ಲಿಗೆ.

ಎನಿತು ಜನರು ಬಂದರೇನು
ಎನಿತು ಜನರು ಹೋದರೇನು
ನೆನೆದರಿಲ್ಲ ಕುರುಡನಿರವ
ಮನದ ರಂಗದಿ.

“ ಇವನ ಕೂಗು ಕಿವಿಗೆ ಅಲಗು
ಇವನ ರೂಪು ಕಣ್ಗೆ ಘೋರ
ಜವನ ಪುರಕೆ ಹೋಗದೇಕೆ
ಇವನು ನಿಂತನು.

ಪಾಪಮಾಡಿ ಕುರುಡನಾಗಿ
ತಾಪಬಡುತ ಕೊರಗಿ ಸೊರಗಿ
ಈ ಪುರದಲಿ ಬಂದು ನಿಂದು
ರೂಪುಗೆಡಿಪನು. ''

ಹೀಗೆ ಜನರು ಕೆಲರು ಆಡಿ
ಹೋಗುತಿರಲು ಬೀದಿಯಲ್ಲಿ
ಕೂಗಿ ಕೂಗಿ ಕುರುಡನವನು
ಬಾಗಿ ನಿಂದನು.

ಕಾಲುಗಂಜಿಗಳಲಿ ತೊಳಲಿ
ಕೂಲಿಮಾಡಿ ಉಂಬ ಹೆಣ್ಣು
ಆಲಿಸುತ್ತ ಅವನ ಕೂಗ
ಸೋತು ಬಂದಳು.

ಹಣ್ಣು ಮಡಲಲಿಟ್ಟುಕೊಂಡು
ಹೆಣ್ಣುಮಗಳು ಬಂದಳವಳು,
ಕಣ್ಣು ಅರಳೆ ನೋಡಿಯವನ
" ಅಣ್ಣ! " ಎಂದಳು.

ಸೊಗದ ಮಾತು ಸುಧೆಯ ಮಾತು
ಬಗೆಯ ಹಿಡಿವ ನಲ್ಮೆವಾತು
ಪುಗಲು ಕಿವಿಯ " ಶಿವನೆ! " ಎಂದು
ಮೊಗವನೆತ್ತಿದ.

" ಕಾಸ ನೀಡಿ ಧರ್ಮದವರು
ಲೇಸನೀವ ಶಿವನು ನಿಮಗೆ
ಹೇಸಬೇಡಿ ಕುರುಡನೆಂದು
ಘೊಸಿಪಟ್ಟೆನು."

" ಕಾಸು ಎನ್ನ ಬಳಿಯೊಳಿಲ್ಲ
ಕಾಸು ಕೊಟ್ಟು ಕೊಂಡೆ ಹಣ್ಣ
ಆಸೆಪಟ್ಟು ತಿನ್ನಲೆಂದು
ಈಸು ನಿನಗಿದೆ."

ಮಡಲಲಿದ್ದ ಹಣ್ಣ ತೆಗೆದು
ಎಡದ ಕೈಯಲದನು ಹಿಡಿದು
ನಡುವ ಮರೆಯ ಚೂರಿಯಿಂದ
ಒಡನೆ ಕೊಯ್ದಳು.

ಹಣ್ಣಿನೊಳಗೆ ರಸದ ಮಾವು
ಬಣ್ಣತೀವಿ ಬೆಳೆದ ಮಾವು
"ಅಣ್ಣ ಕೊಳ್ಳೊ" ಎಂದು ಕೈಗೆ
ಉಣ್ಣಲಿತ್ತಳು.

" ಶಿವನೆ ! " ಎಂದು ಕಣ್ಗೆ ಒತ್ತಿ
" ಶಿವನೆ ! " ಎಂದು ಎದೆಗೆ ಒತ್ತಿ
ಶಿವನ ಮಾತಿನೊಡನೆ ಹಣ್ಣ
ಸವಿಯು ಹೆಚ್ಚಲು,

## ಕವಿಯ ಸೋಲು

ತಿಂದು ಕುರುಡ ಕೈಯ ಮುಗಿದ,
ಇಂದುಧರನು ಮೆಚ್ಚುತಿರಲು
ನಿಂದ ಮಗಳು ಧರೆಗೆ ಬಗ್ಗಿ
ವಂದಿಸೆದ್ದಳು.

ಅವಳ ಕಣ್ಗೆ ಕುರುಡನಲ್ಲ
ಶಿವನೆ ಎಂದು ತಿಳಿದಳವಳು
ಅವನ ಮನಕೆ ಹೆಣ್ಣದಲ್ಲ
ಶಿವನ ಕಂಡನು.

ಕಣ್ಣು ಇದ್ದು ಕುರುಡರೆಷ್ಟೊ
ಮಣ್ಣು ಹಿಡಿವ ಕಲ್ಲು ಹಿಡಿವ
ಒಣ್ಣ ಬಳೆವ ಬೀಗಿ ಮೆರೆವ
ಸಣ್ಣ ಮನುಜರು.

ಮೇಲು ಜಾತಿ ಕೀಳು ಜಾತಿ
ನೂಲು ಜಾತಿ ಎನಲು ಬೇಡ
ಶೂಲಿಯೊಲಿದ ಜಾತಿಯಲ್ಲಿ
ಶೀಲ ದೊಡ್ಡದು.

ದೀನನಲ್ಲಿ ದೇವನಿಹನು
ದಾನಿಯಲ್ಲಿ ದೇವನಿಹನು
ದೀನದಾನಿಯಲ್ಲದವರ
ಶ್ವಾನ ಎಂಬುದು.

## ಕವಿಯ ಸೋಲು

ಕುರುಡ ಕುಂಟ ಹೆಳವರಲ್ಲಿ
ಮರುಕಗೊಂಡು ಬೋಸವಿಕ್ಕು
ಹರಸು ಮೆಚ್ಚಿ ತೇಗಿ ತಾನು
ಹರಸಿ ಪೊರೆವನು.

---

## ಪುಣ್ಯಶಾಲಿ

ನೀವೆಲ್ಲ ಪುಣ್ಯಶಾಲಿಗಳಮ್ಮ
ಹಠತೊಟ್ಟು ಬೈಗಳಿಂ ಕೋಪದಿಂ
ಕೋರಿಕೆಯ ಸಾಧಿಪಿರಿ, ಸುಖಿಸುವಿರಿ
ಒಡವೆ ವಸ್ತುವ ಪಡೆದು ಮೆರೆಯುವಿರಿ.
ಎನ್ನಲ್ಲಿ ಹಠವಿಲ್ಲ ಮುನಿಸಿಲ್ಲ
ಬೈಗಳಂ ಮುನ್ನ ನಾ ಕಲಿತಿಲ್ಲ
ಅಸುವೊಂದು ದೇಹವೆರಡಾಗಿಹುದು
ಎಂದು ಸಂಸಾರ ನಡೆಸುವೆನಮ್ಮ.

ಎನ್ನ ಪತಿ ಮನೆಗೆ ಬರೆ ಮುಗುಳು ನಗೆ ಸೂಸುವೆನು
ಬಂದವರನುಪಚರಿಸಿ ಸಲ್ನುಡಿಯ ನುಡಿಯುವೆನು
ಏಕಾಂತದಲಿ ಮೆಲ್ಲನವರ ಬಳಿಸಾರುವೆನು
ತನಿವಣ್ಣು ಕೆನೆವಾಲು ತಾಂಬೂಲ ನೀಡುವೆನು.
ವಿನಯದಿಂ ಮೃದು ಮಧುರವಾಣಿಯಿಂ
"ಎಲೆ ನಲ್ಲ! ಮಾತೊಂದು ನಡೆಸುವೆಯ
ಕೇಳಲೋ ಬೇಡವೋ" ಎನ್ನುವೆನು.

ಒಡನವರು ನಗುನಗುತ
ಬರಸೆಳೆದು ಬಿಗಿದಪ್ಪಿ
"ಎಲೆ ದೇವಿ! ಎನ್ನುವರು
ಹೂಮಳೆಯ ಸುರಿಯುವರು
ಜಡೆಮುಡಿಯ ನೇವರಿಸಿ
ಬಳಿಯಲ್ಲಿ ಕುಳ್ಳಿರಿಸಿ

ತಂದೆತಾಯ್ಗಳ ಬಿಟ್ಟು ಬಂದಿರುವೆ
ಒಡಹುಟ್ಟಿದರ ಬಿಟ್ಟು ಬಂದಿರುವೆ
ನಾನೆ ಪರಮಾರಾಧ್ಯನೆಂದೆಂದು
ಕನಸಿನಲಿ ನೆನೆಸಿನಲಿ ತಿಳಿದಿರುವೆ
ಕುಸುಮ ಕೋಮಲ ಹೃದಯದಲಿ ಬಯಕೆ ಏನಿಹುದೊ
ಏನಿಹುದೊ ಈ ಎನ್ನ ಗೃಹಲಕ್ಷ್ಮಿ ಹೃದಯದಲಿ!
ರಾಣಿಯಲ್ಲವೆ ನೀನು
ನಾನು ನಿನ್ನಯ ತೊತ್ತು
ಸರ್ವಸ್ವ ನಿನಗಿರಲು
ಸರ್ವಾಧಿಕಾರಮುಂ
ನಿನಗೆ ನಾ ಕೊಟ್ಟಿರಲು
ಎನ್ನ ಬೇಡಲದೇಕೆ"
ಎಂದೆನ್ನ ಆದರಿಸಿ ನುಡಿಯುವರು
ಕೊರಳ ಸರಿಗೆಯ ಕೀಲಿ ತೋರುವರು.

ಪ್ರೇಮ ಭಾಂಡಾಗಾರ ಎನಗಿರಲು
ಕನಕ ಭಾಂಡಾಗಾರ ಎನಗಿರಲು
ಎಲ್ಲವುಂ ಎನ್ನ ಕೈಯೊಳಗಿರಲು
ಒಪ್ಪದಲಿ ಸಂಸಾರ ನಡೆಸುತಿರೆ
ಶಾಂತಿ ಸುಖ ನಗುವೆಲ್ಲ ತುಂಬುತಿರೆ
ಒಡವೆ ವಸ್ತುವನಿಟ್ಟು ಮೆರೆಯದಿರೆ
ಏನು ಕುಂದಪ್ಪುದೋ ನಾನರಿಯೆನಮ್ಮ;
ನೀವೆಲ್ಲ ಪುಣ್ಯಶಾಲಿಗಳಮ್ಮ
ಎನಗೇನು ಆ ಪುಣ್ಯ ಬೇಡಮ್ಮ.

---

# ಪೂಜಾರಿ

ದೇವರ ಸತ್ಯವು ಊರಲಿ ಹರಡಿತು
ಬಂದರು ಭಕ್ತರು ತವುತವುಗೆ ।
ಹೂವನು ಕಾಯನು ಹಣ್ಣನು ಜೋಡಿಸಿ
ತಂದರು ಹರಕೆಯ ಬೇಡಲಿಕೆ.

ದೇವರ ಮಹಿಮೆಯು ಹೆಚ್ಚಾಗಿರುವುದು
ಕಿರುಗುಡಿ ಬಾಗಿಲು ಬಿಗಿದಿಹುದು ।
ದೇವರ ನೋಡಲು ಕಂಡಿಗಳಿರುವುವು
ಕಿರುಬಾಗಿಲ ಬೆಳಕಂಡಿಗಳು.

ಬಂದವರೆಲ್ಲರು ಕಾಯಿಗಳೊಡೆವರು
ಹೊರಗಡೆ ಕರ್ಪೂರ ಹಚ್ಚುವರು ।
ತಂದಿಹ ಮುಡುಪನು ದೇವರು ಕೊಳ್ಳಲು
ಹೊರಗಡೆ ತಪ್ಪದೆ ಬಿಟ್ಟಿಹರು.

ಸಂಕಟಪಟ್ಟವರೊಬ್ಬರೆ ಬಂದರೆ
ಸಂಜೆಯುಲೇಕಾಂತದಲಿ ।
ಬಿಂಕವ ಬಿಟ್ಟಾ ದೇವರು ನುಡಿವನು
ಅಂಜಿಕೆ ಕಳೆವನು ನಲ್ಮೆಯಲಿ.

## ಕವಿಯ ಸೋಲು

ಪೂಜಕನಾವನೊ ಕಣ್ಣಲಿ ಕಾಣರು
ಅನುದಿನ ಪೂಜೆಯು ನಡೆಯುವುದು ।
ಜಾಜಿಯು ಮಲ್ಲಿಗೆ ಹೊಸ ಹೂಮಾಲೆಯು
ದಿನದಿನ ಕೊರಳಲಿ ಮೆರೆಯುವುದು.

ಸತ್ಯದ ದೇವರು ಏಳಡಿ ಎತ್ತರ
ಮೂರಡಿ ಪೀಠದ ಮೇಲಿಹನು ।
ನಿತ್ಯದ ಪದವಿಯನೀಯುವ ದೇವರು
ಮೀರಿಹನೆಲ್ಲರ ಮಹಿಮೆಯನು.

ಉಟ್ಟಿಹ ಪೀತಾಂಬರ ಮಿರುಮಿರುಗುತ
ಭಕ್ತರ ಮನವನು ಸೆಳೆಯುವುದು ।
ತೊಟ್ಟಿಹ ಆಭರಣವು ಝುಗಝುಗಿಸುತ
ಭಕ್ತರ ಕಂಗಳ ಕೊರೆಯುವುದು.

ದೇವರ ಮುಂಗಡೆ ನಂದಾದೀವಿಗೆ
ದೀಪಸ್ತಂಭವು ಬೆಳಗುವುದು ।
ಜೀವನ ದೇವನ ಸತ್ಯಸ್ವರೂಪ
ದೀಪ್ತಿಯೆ ಎಂಬುದ ತೋರುವುದು.

ದೇವರ ಮುಖವನು ನೋಡುತ ನಿಂದನು
ಕಣ್ಣೀರ್ಗರೆಯುತ ಪೂಜಾರಿ ।
"ಏವೆನು ದೇವರೆ!" ಎನ್ನುತ ಬಿಕ್ಕುತ
ಕಣ್ಣೀರ್ಗರೆದನು ಪೂಜಾರಿ.

"ಬೆನ್ನಲಿ ನಿಲ್ಲುತ ಮೋಸವ ಮಾಡುವೆ
ಇಲ್ಲದ ಭರವಸೆ ನೀಡುವೆನು ।
ನಿನ್ನಯ ಸೇವೆಯ ನೆಪದಲಿ ದಿನವೂ
ಬಳ್ಳದ ಪಾಪವ ಗಳಿಸುವೆನು.

ದೇವರು ಆಡಿದನೆಂದೇ ನಂಬುತ
ಭಕ್ತರು ಧೈರ್‍ಯವ ತಾಳುವರು ।
ಕಾವನು ತಮ್ಮನು ಕಷ್ಟಗಳಿಂದಲಿ
ಮುಕ್ತರು ತಾವೆಂದರಿಯುವರು.

ಏನೇನಾದರು ಆಡಲು ಬಾರದು
ನಿಲ್ಲುವೆ ಹಿಂಗಡೆ ನಾನೆಂಬೆ ।
ಮೌನದಿ ಕೇಳುತ ದುಃಖದ ಹೊರೆಯನು
ಸೊಲ್ಲದು ಬರುವುದು ಬಾಯಿಂದೆ.

ನಿನ್ನಿಂದಲ್ಲವೆ ಈ ಬೂಟಾಟಿಕೆ
ಮಿಕ್ಕಿನ ಮೋಸದ ಜೀವನವು ।
ನಿನ್ನಿಂದಲ್ಲವೆ ಗುಡಿ ಗೋಪುರಗಳು
ಠಕ್ಕನ ವಾಸದ ಮಂದಿರವು.

ಬಡವರು ನಿನಗೆಂದೇ ಮುಂದೊಟ್ಟಿದ
ಪಣ್ಗಳ ಕಾಯ್ಗಳ ರಾಶಿಯನು ।
ಆಡಿದ ಮಾತಿಗೆ ತಪ್ಪದೆ ತಂದಾ
ನಾಣ್ಯದ ಮುಡುಪಿನ ಗುಡ್ಡೆಯನು ;

## ಕವಿಯ ಸೋಲು

ಎಲ್ಲವ ನೋಡಿಯು ಮೌನದಿ ನಿಂದು
ಇಕ್ಕಿದೆ ಶೂಲವ ಎನ್ನೆದೆಗೆ ।
ಸುಳ್ಳಿನ ಬಾಳ್ಕಿಗೆ ಲಂಚವ ಕೊಡಿಸಿ
ಠಕ್ಕನ ಮೆಲ್ಲನೆ ಮಾಡಿಸಿದೆ.

ನಾಳೆಯೆ ಬರುಪರೊ ಇಂದೇ ಬರುವರೊ
ದುಕ್ಕವ ಕಣ್ಣಲಿ ಸೂಸುತ್ತ ।
ಬಾಳನು ಕೆಡಿಸಿದ ಮೋಸದ ದೇವರು
ಮುಕ್ಕನ ಹೊಳೆಂದಾಡುತ್ತ ;

ಪೊರೆಯುವೆನೆನ್ನುತ ಮುಡುಪನು ತಿಂದನು
ನಾಚದೆ ಹೊಟ್ಟೆಯ ಕುದಿಸಿದನು ।
ಕರುಣಾಹೀನಗೆ ಕರುಣವ ತೋರದೆ
ಆಚೆಗೆ ತಳ್ಳೀ ದೇವರನು.

ಎಂದವರೆಲ್ಲರು ದುಃಖದಿ ಕೋಪದಿ
ಬಂದೀ ಗುಡಿಯನು ಮುತ್ತುವರೊ ।
ಇಂದೇ ಹೊತ್ತಿಸಿ ಗುಡಿಯನು ಹೊತ್ತಿಸಿ
ಅಂದದ ಮೂರ್ತಿಯ ಸೀಯುವರೊ

ನಿನ್ನಿಂದಲ್ಲವೆ ಎನಗೀ ಪಾಪವು
ಹೃದಯವ ಬೇಯಿಪ ಸಂಕಟವು ।
ನಿನ್ನಂತೆಯೆ ನಾನೂ ಕಲ್ಲಾದರೆ
ಒದಗದು ಎನಗೀ ವೇದನೆಯು.

ನಾಳೆಯೆ ನಿನ್ನೀ ಮೂರ್ತಿಯನೊಡೆವೆನು
    ಭಕ್ತರಿಗರಿಪೆನು ಮೋಸವನು ।
ಮೂಳನ ತಪ್ಪನು ಮನ್ನಿಸಿರೆನ್ನುತ
    ಭಕ್ತರ ಕಾಲಲಿ ಬೀಳುವೆನು.

ಬೇಡುವೆನವರಾ ಪಾದದ ಧೂಳಿಯ
    ಇಕ್ಕುತ ಶಿರದಲಿ ಬೇಡುವೆನು ।
ಕೋಡಿಯ ಹರಿಯಿಸಿ ಕಣ್ಣೀರಿಂದಲಿ
    ಭಕ್ತರ ಪದಗಳ ತೊಳೆಯುವೆನು.''

ಎನುತಾ ದೇವರ ನೋಡುತ ನಿಂದನು
    ದುಃಖದಿ ತುಂಬಿದ ಪೂಜಾರಿ ।
ಏನೊಂದುತ್ತರ ಬಾರದೆಯಿರಲು
    ದುಃಖದಿ ಹೊರಟನು ಪೂಜಾರಿ.

ಹಣ್ಣೂ ಕಾಸೂ ಕಾಯಿಗಳೆಲ್ಲವ
    ತಂದನು ದಿನದಿನ ತರುವಂತೆ ।
ಕಣ್ಣೂ ಕಾಲೂ ಇಲ್ಲದ ಬಡವರ
    ಮಂದಿಗೆ ಕೊಟ್ಟನು ಬಿಡದಂತೆ.

ದೇವರ ಒಡವೆಯ ದೇವರಿಗೊಪ್ಪಿಸಿ
    ಹೊತ್ತಿಹ ಭಾರವನಿಳುಹಿದನು ।
ನೋವನು ಮಾಣಿಸಿ ಆರಿಗು ಕಾಣದೆ
    ಕತ್ತಲೆ ದಾರಿಯ ಹಿಡಿದಿಹನು.

## ಕವಿಯ ಸೋಲು

ಮರುದಿನ ತಪ್ಪದೆ ಸುತ್ತಿಗೆ ಹಾರೆಯು
ತಂದನು ದುಃಖದಿ ಪೂಜಾರಿ ।
ಕಿರುಬಾಗಿಲ ಬೀಗವ ಬಿಗಿದಿಕ್ಕುತ
ನಿಂದನು ಒಳಗಡೆ ಪೂಜಾರಿ.

ಶಿಲ್ಪಿಯು ಮಾಡಿದ ಭಕ್ತಿಯ ಕಾಣಿಕೆ
ಚೆಲುವನು ತುಂಬಿದ ಮೂರ್ತಿಯದು ।
ಕಲ್ಪಿಸಿ ದೇವರ ಹೃದಯದಿ ಕಾಣುತ
ನಲವಿಂ ಮಾಡಿದ ಮೂರ್ತಿಯದು.

ಸುತ್ತಿಗೆ ಹಾರೆಯ ಭೀತಿಯು ತೋರದು
ಸೌಮ್ಯದ ಮೂರ್ತಿಯ ಮುಖದಲ್ಲಿ ।
ಚಿತ್ತದಿ ನಗುವಂತಾ ಬಾಯ್ದೆರೆಗಳು
ರಮ್ಯದಿ ತೆರದಿವೆ ಮುಖದಲ್ಲಿ.

ಪೆರೆನೊಸಲಲಿ ತಿದ್ದಿದ ಮುಂಗೂದಲು
ಹಿರಿಯ ಕಿರೀಟದ ಮಣಿಕಾಂತಿ ।
ಎರಡೂ ಕಿವಿಯಲಿ ತೂಗುವ ಕುಂಡಲ
ಕೊರಳಲಿ ಮೌಕ್ತಿಕ ಸಿತಕಾಂತಿ.

ನೋಡುತ ನಿಂದನು, ನೋಡುತ ನಿಂದನು
ಸುತ್ತಿಗೆ ಹಿಡಿದಾ ಪೂಜಾರಿ ।
ಕೂಡಿತು ಕಣ್ಣಲಿ ಜಾರಿತು ಬಿಸಿಹನಿ
ಅತ್ತಲೆ ತಿರುಗಿದ ಪೂಜಾರಿ.

## ಕವಿಯ ಸೋಲು

ಹೊರಬಾಗಿಲಲೊಬ್ಬರು ಬರೆ ಕಾಣುತ
ಹಿಂಗಡೆ ಹೋದನು ಭೀತಿಯಲಿ ।
ಬರುವರು ಆರೋ ನೋಡುವೆನೆನ್ನುತ
ಹಿಂಗದೆ ನೋಡಿದ ಮರುಕದಲಿ.

ಕಾಣಲು ಬಂದಳು ಸಾಧ್ವೀಮಣಿಯು
ಮಡಿಲಲ್ಲಿರುವುದು ಎಳಗೂಸು ।
ಪ್ರಾಣದ ರತ್ನವನಪ್ಪುವ ತೆರದಲಿ
ಅಡಗಿಸಿ ಅಪ್ಪಿಹ ಎಳಗೂಸು.

ಒಳಗುಡಿ ಹೊಸ್ತಿಲ ಮೇಲದನಿಟ್ಟಳು
ನೋಡಿದಳಾ ಜೀವದ ಕಣಿಯು ।
ಘಳಿಲನೆ ದೇವಗೆ ತಾ ಪೊಡಮಟ್ಟಳು
ಬೇಡಿದಳಾ ಲೋಕದ ದಣಿಯು.

“ ಆರನು ಹೆತ್ತೆನು ಗಂಡೂ ಹೆಣ್ಣೂ
ಕುಳಿಯಲಿ ಇಟ್ಟೆನು ಆರನ್ನು ।
ಹೊರುವುದು ತಪ್ಪದು ಹೆರುವುದು ತಪ್ಪದು
ಬೆಳೆದುದ ಕಾಣೆನು ಒಂದನ್ನು.

ಇದೆಗೋ ದೇವರೆ, ಏಳನೆಯ ಮಗುವು
ನಿನ್ನೀ ಮಡಿಲಲಿ ಹಾಕಿಹೆನು ।
ಇದನೊಂದಾದರು ಬೆಳಸುವ ಭಾರ
ನಿನ್ನಯ ಮೇಲೆಯೆ ಇಟ್ಟಿಹೆನು.

## ಕವಿಯ ಸೋಲು

ಕಳಕಳ ನಗುವಾ ಎಂತಹ ಚೆಲುವಿನ
ರನ್ನದ ಮಗುವೆಂಬುದ ನೋಡು ।
ಪುಳಪುಳಕನೆ ಕನ್ನೈದಿಲ ಕಂಗಳ
ನಿನ್ನೆಡೆ ತಿರುಹುತ್ತಿದೆ ನೋಡು ;

ಹೃದಯದ ಉತ್ಸವ ಚೆಲುವಿನ ಪುತ್ತಳಿ
ಎನ್ನಯ ತಂದೆಯೆ ಸುಡಿಯುವೆನು ।
ಇದನೊಂದಾದರು ಬೆಳೆಯಿಸಿಕೊಟ್ಟರೆ
ಚಿನ್ನದಿ ಮಗುವನು ಸಲಿಸುವೆನು.''

ಆಡಿದ ಮಾತನು ಕೇಳುತ ಕೇಳುತ
ಕಣ್ಣೀರ್ ತುಂಬಿದ ಪೂಜಾರಿ ।
ಬಾಡಿತು ಮುಖವದು ಕಣ್ಣೀರ್ ಹರಿಯಿತು
ಹೆಣ್ಣಿಗೆ ನುಡಿದನು ಪೂಜಾರಿ.

'' ಅಳದಿರು ಮಗಳೇ ಅಳದಿರು ತಾಯಿ
ನಿನ್ನೀ ಮಗುವನು ಸಲಹುವೆನು ।
ಬೆಳೆಯುವ ಮಕ್ಕಳನಿನ್ನೂ ಕೊಡುವೆನು
ರನ್ನದ ಮಕ್ಕಳ ಪೊರೆಯುವೆನು.''

ಆಡಿದ ಭರವಸೆ ಕೇಳುತಲೆದ್ದಳು
ಹರುಷದಿ ಕಂಗಳು ತುಂಬಿರಲು ।
ಜೋಡಿಸಿ ಕೈಗಳ '' ಸತ್ಯದ ದೇವರೆ
ಕರುಣದಿ ಪೊರೆಯೈ '' ಎಂದವಳು

## ಕವಿಯ ಸೋಲು

ಮಗುವನು ಎತ್ತುತ ತನ್ನೆದೆಗಪ್ಪುತ
ಚುಂಬಿಸಿ ಮುಖವನು ನೋಡುತ್ತ ।
ನಗುವನು ಬೀರುತ ದೇವಗೆ ತೋರುತ
ಕುಂಬಿಸಿ ನಡೆದಳು ಮನೆಯತ್ತ.

"ಅಯ್ಯೋ ದೇವರೆ!" ಎನ್ನುತ ನಿಂದನು
ಎಂತೀ ಮಗುವನು ಸಲಹುವೆನು ।
ಹುಯ್ಯಲು ಇಡುವಾ ಸಾಧ್ವಿಯ ಮಕ್ಕಳ
ಪಂತದಿ ಬೆಳೆಯಿಸಿ ನಡೆಸುವೆನು.

ಸೆರಗಿನ ಕೊನೆಯಲಿ ಕಣ್ಣೀರೊರಸುತ
ಮತ್ತೊಬ್ಬಳು ಸಾಧ್ವೀಮಣಿಯು ।
ಕಿರುಬಾಗಿಲ ಬಳಿ ನಡುಗುತ ಬಂದಳು
ಕುತ್ತಿಗೆ ಹಿಡಿಯಿತು ದುಃಖವದು.

ನುಡಿಯಲು ಆರಳು, ನಿಲ್ಲಲು ಆರಳು
ಬಾಗಿಲ ಮೆಲ್ಲನೆ ನೆಮ್ಮಿದಳು ।
ಇಡಿದಾ ದುಃಖದಿ "ದೇವರೆ!" ಎಂದಳು
ಸಾಗವು ಮುಂದಿನ ಮಾತುಗಳು.

ಮಾತಿಗೆ ಮೀರಿದ ದುಃಖವನೆಂತೋ
ತಡೆಯುತ ಸಾಧ್ವಿಯು ಸೆರಗಿನಲಿ ।
ದಾತಗೆ ದೇವಗೆ ತುಂಬಿದ ಕಣ್ಣಲಿ
ನುಡಿದಳು ಮೆಲ್ಲನೆ ಬಿಕ್ಕುತಲಿ.

## ಕವಿಯ ಸೋಲು

"ಕೊಳ್ಳೈ ದೇವರೆ, ಎನ್ನೀ ಪ್ರಾಣವ
ಉಳುಹಿಸಿಕೊಡು ಪತಿದೇವನನು ।
ಒಳ್ಳಿತ ಮಾಡೈ, ಕರುಣವ ತೋರೈ
ಕಳೆಯದೆ ಮಂಗಳಸೂತ್ರವನು.

ತಳ್ಳದಿರೆನ್ನನು ದುಸ್ಸಹ ನರಕಕೆ
ದಳ್ಳುರಿ ವೈಧವ್ಯಕೆಯಿನ್ನು ।
ಕೊಳ್ಳೈ ದೇವರೆ ಸಾಧ್ವಿಯ ಜೀವವ
ಕೊಳ್ಳದೆ ಜೀವದ ಪತಿಯನ್ನು.

ಬಾರೈ ದೇವರೆ, ಎನ್ನಯ ಬಾಳಿಗೆ
ಸಂಬಕೆಯಾಗಲೆ ನುಡಿಯುವುದು ।
ಆರುವ ದೀಪಕೆ ಆಯುವ ತೈಲವ
ತುಂಬಿಸಿ ಬೆಳಗಿಸಿ ಕರುಣಿಪುದು.

ಸತಿಯಳ ಜೀವವು ಕವಡೆಯು ಬಾಳದು
ಉಳಿದರು ಹೋದರು ಜಗವಳದು ।
ಪತಿಯೆಂಬುವ ಸೌಭಾಗ್ಯದ ಸೂರ್ಯನು
ಮುಳುಗಲು ಕತ್ತಲೆ ಮುಸುಕುವುದು.

ಮರಳಿಸು ಮನೆಕಡೆ ಎದೆನಡುಗುವುದು
ಮುತ್ತೈದೆಯು ಸಾವಿಚ್ಛಿಪೆನು ।
ತೊರೆದಿಹೆ ಭಯವನು ಸಾವಳಿಗೇಕೆ?
ಇತ್ತೀ ಕೊಳದಲೆ ಬೀಳುವೆನು."

## ಕವಿಯ ಸೋಲು

ಅಂಗನೆಯಳುತಿರೆ ಮರೆಯಲಿ ಅರ್ಚಕ
ಬಿಕ್ಕುತ ಬಿಕ್ಕುತ ನಿಂದಿಹನು ।
ಕಂಗಳ ನೀರನು ಮಿಡಿಯುತ ತೊಡೆಯುತ
ಅಕ್ಕರೆ ಭರವಸೆ ನೀಡಿಹನು.

"ಅಳದಿರು ಮಗಳೇ!" ಎನ್ನಲು ಒಡನೆಯೆ
ಬಿಗಿಯಿತು ಕಂಠವು ಅರ್ಚಕಗೆ ।
ಪುಳಕಿತಳಾದಳು ಚಮಕಿತಳಾದಳು
ಮುಗಿದಳು ಕೈಗಳ ಆ ದನಿಗೆ.

"ಅಳಲನು ಕಳೆವೆನು ಪತಿಯನು ಪೊರೆವೆನು
ಹದುಳದಿ ನಡೆಸುವೆ ನಿಮ್ಮನ್ನು ।
ಅಳದಿರು ಮಗಳೇ, ಅಳದಿರು ತಾಯಿಾ
ಮುದದಲಿ ನಡೆಯೌ ಮನೆಗಿನ್ನು."

ಕನಸೋ ನೆನೆಸೋ ಎನ್ನುತ ಸಾಧ್ವಿಯು
ನಿಂದಳು ಚಣ ಮೈಮರೆಯುತಲಿ ।
ಮನದೊಳು ಮೂಡಿತು ಹರುಷವು ಕೂಡಲೆ
ವಂದಿಸಿ ನಡೆದಳು ತ್ವರಿತದಲಿ.

"ಅಯ್ಯೋ!" ಎನ್ನುತ ಮುಂದಕೆ ಬಂದನು
ಸುತ್ತಿಗೆ ಹಿಡಿದಾ ಪೂಜಾರಿ ।
ಸುಯ್ಯುತ ನೋಡಿದ ದೇವರ ಮುಖವನು
ಅತ್ತನು ಬಳಬಳ ಪೂಜಾರಿ.

## ಕವಿಯ ಸೋಲು

“ ಲೋಕದ ತೊಡಕನು ಬಿಡಿಸದೆ ದೇವರೆ
ಪಾಪದ ಭೀತಿಯು ತೊಲಗಿಸದೆ ।
ಏಕಿಂತೆಲ್ಲರ ದುಃಖಕೆ ಸಿಕ್ಕಿಸಿ
ತಾಪಕೆ ನೀಗುರಿ ಮಾಡಿಸುವೆ ?

ಲೋಕದ ದುಃಖವ ನೋಡುತ ನೋಡುತ
ಭರವಸೆ ಜೀವನವೆನಿಸುವುದು ।
ಸಾಕೈ ದೇವರೆ ಭರವಸೆ ಕೊಡುವೆನು
ಪೊರೆಯುವ ಶಕ್ತಿಯು ಕರುಣಿವುದು.

ನಿನ್ನಯ ಹೆಸರಲಿ ನಿನ್ನಯ ಮರೆಯಲಿ
ನೋವನು ಕಳೆಯಲು ಆಡುವೆನು ।
ನಿನ್ನೀ ಮೂರ್ತಿಯನೊಡೆದದ್ದಾದರೆ
ಆವನ ಮರೆಯಲಿ ನಿಲ್ಲುವೆನು.”

ಆಯಿತು ಅಲ್ಲಿಯೆ ಕಾಂತಿಯು ವಿಗ್ರಹ
ಒಡನೆಯೆ ಬೆಳಗಿತು ಮಂದಿರವು ।
ಭಯದಿಂದರ್ಚಕ ಕೈಗಳ ಮುಗಿದನು
ಹಿಡಿದನು ದೇವರ ಪದಗಳನು.

ಮಂದಸ್ಮೇರವ ದೇವರು ಬೀರುತ
ಮುಂದಿನ ಮಾತನು ಆಡಿದನು ।
“ ಮಂದಿಯು ಸಲಹಿದೆ ನೀನೇ ದೇವರು
ಕುಂದದೆ ನೀಡಿದೆ ಅಭಯವನು.

## ಕವಿಯ ಸೋಲು

ದಯವೇ ದೇವರು, ದೇವರೆ ದಯೆಯು
ಭರವಸೆ ತಪ್ಪದೆ ಫಲಿಸುವುದು ।
ಭಯದಲಿ ರಕ್ಷಣೆ ಬೇಡುವ ದೀನರ
ಪೊರೆಯುವ ಶಕ್ತಿಯು ದೊರೆಯುವುದು.

ಗೊಡ್ಡೋ ಗಿಡ್ಡೋ ಸಂಬಿಕೆಯಿದ್ದರೆ
ತೊರೆಯನು ದಾಟಿಪ ಹರುಗೋಲು ।
ಗಡ್ಡೆಯನೇರಿಸಿ ಕಷ್ಟವ ನೀಗಿಸಿ
ಕರೆಯನು ಕಾಣಿಪ ಸಾಧನವು.''

ಬೆಳಕೂ ಮಾತೂ ಅಡಗಲು ಒಡನೆಯೆ
ಮೆಲ್ಲನೆ ಎದ್ದನು ಪೂಜಾರಿ ।
ಕಳೆದುವು ಕೆಲದಿನ, ದೇವರು ಕರೆದನು
ಅಲ್ಲಿಗೆ ಹೋದನು ಪೂಜಾರಿ.

ಬಿತ್ತರ ದೇಗುಲವಲ್ಲಿಯೆ ಇರುವುದು
ದೇವರು ಒಳಗಡೆ ನಿಂದಿಹನು ।
ಸುತ್ತಿಗೆ ಹಾರೆಯು ಮೂಲೆಯಲಿರುವುದು
ಆವನೊ ಅರ್ಚಕ ಕಾಣುವನು.

ದೇವರ ಸತ್ಯವು ಮಾಸುತ ಬಂದಿತು
ಗೋಡೆಯ ಕಲ್ಗಳು ಉರುಳಿದುವು ।
ಸೇವೆಗೆ ಬಂದವರೆಲ್ಲರು ಕದಿಯುತ
ಮಾಡದ ಮನೆಗಳ ಕಟ್ಟಿದರು.

## ಒಂದು ಕಾಗದ

ನಿಮ್ಮ ಪತ್ರ ಬಂದು ಸೇರಿ
ಎರಡು ಮೂರು ಬಾರಿಯೋದಿ
ಎಲ್ಲ ತಿಳಿದೆನು.

ನೀವು ನನಗೆ ಗಂಡನಲ್ಲ
ನಾನು ನಿಮಗೆ ಹೆಂಡಿರಲ್ಲ
ನೀವು ತಿಳಿವುದು.

ಕುಂಟು ಕಾಲು ಬಚ್ಚು ಬಾಯಿ
ಮೆಳ್ಳುಗಣ್ಣು, ನಿಮ್ಮ ಸೇವೆ
ಮಾಡಲಾರೆನು.

ಬ್ರಹ್ಮ ಹಿಂದೆ ಗಂಟು ಹಾಕಿ
ಗಂಡಹೆಂಡಿರಾದವೆಂದು
ನೀವು ಬರೆವಿರಿ.

ಬ್ರಹ್ಮ ಗಿಮ್ಮ ಹಾಕಲಿಲ್ಲ
ಅಪ್ಪ ತಂದು ನನಗೆ ನಿಮಗೆ
ಗಂಟುಹಾಕಿದ.

ಹೆತ್ತ ತಂದೆ ಮಾರಿಕೊಂಡು
ಮೃತ್ಯುವಾಗಿ ಕೊಲ್ಲಲಿಂತು
ಮಾಡಲೇನಿದೆ.

## ಕವಿಯ ಸೋಲು

ಶಾಸ್ತ್ರ ಗೀಸ್ತ್ರ ತಿಳಿಯೆ ನಾನು
ಬರೆದ ಜನರು ಹೆಂಡಿರಾಗಿ
ಸೇವೆಮಾಡಲಿ.

ನೋಟ ಬೇಟ ಗಂಡಿಗೆಂದು
ಧರ್ಮಶಾಸ್ತ್ರ ಹೆಣ್ಣಿಗೆಂದು
ನುಡಿವರೆಲ್ಲರು.

ಕೋರ್ಟು ಗೀರ್ಟು ಆಡಬೇಡಿ
ಜಡ್ಜಿ ಧರ್ಮವೇನು ಬಲ್ಲ
ನಾನು ತಿಳಿಸುವೆ.

ಕುರ್ಚಿಮೇಲೆ ಕುಳಿತುಕೊಂಡು
ಏನೊ ಗೀಚಿ ಎದ್ದುಬರುವ
ಮಾತಿದಲ್ಲವು.

ತನ್ನ ಮಗಳ ನಿಮಗೆ ಕೊಟ್ಟು
ತನ್ನ ಮಗನ ಎನಗೆ ಕೊಟ್ಟು
ಮದುವೆ ಮಾಡಲಿ.

ಎನ್ನ ದುಃಖ ಆರಿಗುಂಟು
ಬಾಳಬೇಕು, ಬಾಳಲಾರೆ
ಹಾಳು ಲೋಕವು.

ಬಯ್ವ ಜನರು ಜರಿವ ಜನರು
ಅವರಿಗೇನು, ಬಾಯಿ ಕೊಬ್ಬು
ನೋವು ತೆಗೆವರೆ?

**ಕವಿಯ ಸೋಲು**

ಬಲ್ಲೆನವರ ಮನದ ಭಾವ
ಇಂದು ನಾನು ಸೂಳೆಯಾಗೆ
ಸುಖಿಪರೆಲ್ಲರು.

ಭೂಮಿ ಮೇಲೆ ಇರುವಳಲ್ಲ
ಇಂದೆ ನಾನು ಕೆರೆಗೆ ಬಿದ್ದು
ಜನ್ಮ ನೀಗುವೆ.

ಶಾಸ್ತ್ರ ಧರ್ಮ ತಣ್ಣಗಾಗಿ
ಬಯ್ವ ಜನರು ಉರಿದು ಹೋಗಿ
ಲೋಕವಡಗಲಿ.

---

## ವೇದಾಂತ

ವೇದಾಂತ ಹೇಳಬಹುದು
ಎಲ್ಲರೂ ಕೇಳಬಹುದು
ಶಾಲನ್ನು ಸುತ್ತಿಕೊಂಡು
ಬಿರುದನ್ನು ಧರಿಸಿಕೊಂಡು
ವ್ಯಾಖ್ಯಾನ ಮಾಡಬಹುದು
ಪುಸ್ತಕವ ಬರೆಯಬಹುದು
ವೇದಾಂತ ಸಮಯಕ್ಕೆ ಬರುವುದೇನು ?
ಕರುಳನ್ನು ಸಂತವಿಡಲಪ್ಪುದೇನು ?

ಕಷ್ಟಗಳು ಬಂದು ಮುತ್ತಿ
ದುಃಖಗಳು ಬಂದು ಒತ್ತಿ
ರೋಗಗಳು ಬಂದು ಹತ್ತಿ
ಸಾಲಗಳು ಬಂದು ಸುತ್ತಿ
ಕಣ್ಕಣ್ಣು ಬಿಡುತಲಾಗ
ಮತಿಗೆಟ್ಟು ಹೋಗುವಾಗ
ವೇದಾಂತ ಬರುವುದನು ನೋಡಬೇಕು
ವೇದಾಂತ ನುಡಿವುದನು ಕೇಳಬೇಕು.

ತಾನಿದ್ದು ಮುದುಕನಾಗಿ
ಬೆಳೆದ ಮಗ ತೀರಿಹೋಗಿ
ಮೊಮ್ಮಗನು ಬಳಿಗೆ ಬಂದು
ಬೆಪ್ಪಾಗಿಯಳುತ ನಿಂದು
ಬಸಿರೆಲ್ಲ ಕುದಿಯುವಾಗ
ಕೊರಳ ಸೆರೆ ಬಿಗಿಯುವಾಗ
ಹೆಣವನ್ನು ಸುಡುಗಾಡಿಗೊಯ್ಯುವಾಗ
ಚಿಕ್ಕ ಸೊಸೆ ಮುಸುಕಿಟ್ಟು ಕೊರಗುವಾಗ;

ಮುಡುಪನ್ನು ಕಟ್ಟಿತಂದು
ಮುದ್ದು ಮಗಳಳುತ ನಿಂದು
ಪತಿಭಿಕ್ಷೆ ಬೇಡಲಾಗಿ
ಕಡೆಗೆಲ್ಲ ತೀರಲಾಗಿ
ತನ್ನ ಪತಿ ಹೋದನೆಂದು
ತನ್ನ ಬಾಳ್ ಮುಗಿಯಿತೆಂದು
ನೆಲದಲ್ಲಿ ಮೈಮುರಿದು ಬೀಳುವಾಗ
ಕಣ್ಣೊಡೆದು ಎದೆಬಿಚ್ಚಿ ನೋಡುವಾಗ;

ಮುದ್ದಾಡಿ ಬೆಳಸಿದಂಥ
ಮನೆಯೆಲ್ಲ ಬೆಳಗಿದಂಥ
ಮಗುವನ್ನು ಮೃತ್ಯು ಹಿಡಿದು
ಹೆತ್ತವಳು ಬಸಿರು ಹಿಡಿದು

"ಎನ್ನ ಕಂದನ್ನ ಕೊಡಿರಿ
ಎನ್ನ ರತ್ನನ್ನ ಕೊಡಿರಿ"
ಎಂದಂದು ಬಿಕ್ಕುತ್ತ ಕೇಳುವಾಗ
ತೊಡೆ ಮೇಲೆ ಜೀವವದು ನಂದುವಾಗ;

ಊರಾಚೆ ಗುಣಿಯ ತೋಡಿ
ಇಡಲಲ್ಲಿ ಅಣಿಯ ಮಾಡಿ
'ಬದುಕಿದೆಯೊ ಏನೋ!' ಎಂದು
ಭ್ರಮೆಯಿಂದ ಆಸೆ ಬಂದು
ಮತ್ತೊಮ್ಮೆ ಮುಟ್ಟಿ ನೋಡಿ
ಕಡೆಗೊಮ್ಮೆ ಮುಖವ ನೋಡಿ
ಮಣ್ಣಿಂದ ಕಂದನ್ನ ಮುಚ್ಚುವಾಗ
ಜಗವೆಲ್ಲ ಕಣ್ಣಿಂದು ಸುತ್ತುವಾಗ;

ಇವರಾರ ಮಕ್ಕಳೆಂದು
ಅವರಾರ ನೆಂಟರೆಂದು
ಋಣ ಶೇಷ ತೀರಿತೆಂದು
ಸಾಲಿಗರು ಹೋದರೆಂದು
ಕಣ್ಣೀರು ಬತ್ತಿಸುತ್ತ
ಎದೆ ಕಲ್ಲು ಮಾಡಿಸುತ್ತ
ವೇದಾಂತ! ವೇದಾಂತ! ಇರುವುದೇನು
ಇದ್ದರೂ ಅದರಿಂದ ಬಂದುದೇನು?

## ಕವಿಯ ಸೋಲು

ಕಲ್ಲೆದೆಯ ನೀರುಮಾಡಿ
ಕಣ್ಣೀರು ಹರಿದು ಕೋಡಿ
ಮಾಲಿನ್ಯ ಹೋಗುತಿರಲು
ಕರುಣರಸ ತುಂಬುತಿರಲು
ಆರ್ತರಿಗೆ ಮರುಗುವಂತೆ
ಕೈನೀಡಿ ಸಲಹುವಂತೆ
ವೇದಾಂತ ನಮಗೆಲ್ಲ ತಿಳಿವ ತರಲಿ
ಶುದ್ಧಾತ್ಮ ಮಾನವರ ಮಾಡುತಿರಲಿ.

---

# ಚಂಡಿಗೆ ನೊರೆ

ಚಂಡಿ! ನೀ ಗುಣವಂತೆ ಬರಿದೆ ದೂರಿದನವನು,
ಮುದಿಗೂಬೆ ಹೇಳಿದುದೆ ಲೋಕವೆುಚ್ಚಿಕೆಯಾಯ್ತು
ಕಂಡ ಕಂಡವರೆಲ್ಲ ಚಂಡಿತನವೆನಲಾಯ್ತು.
ನಿನ್ನಂಥ ಸುಗುಣಿಗಳು ಈಗೆಲ್ಲಿ ದೊರೆಯುವರು !
ವಿಧಿಯು ಕಾರ್ಪಣ್ಯವಂ ಸೃಷ್ಟಿ ವೈರಸ್ಯವಂ
ಈ ಯುಗದ ಹೆಂಗಳಂ ಬಣ್ಣಿಸಲುಮಳವಲ್ಲ.
ಬಾರೆಂದೊಡಂ ಇಲ್ಲ ಹೋಗೆಂದೊಡಂ ಇಲ್ಲ
ಬೇಕೆಂದೊಡಂ ಇಲ್ಲ ಬೇಡೆಂದೊಡಂ ಇಲ್ಲ
ಕಪ್ಪಕಾಣಿಕೆಗಿಲ್ಲ ನಲ್ನುಡಿಗೆ ಮೊದಲಿಲ್ಲ
ಕೋಪತಾಪಕುಮಿಲ್ಲ ಬೇಡಿಕೆಗೆ ಮುನ್ನಿಲ್ಲ
ಏನೇನ ಪೇಳ್ದೊಡಂ ಅವರಲ್ಲಿ ನಿಷ್ಫಲಂ
ಅವರ ಕೈವಿಡಿದರ್ಗೆ ಇಹದಿ ನಾಯಕ ನರಕ.
ಜಗದ ಮೊಂಡುಗಳೆಲ್ಲ ಒಳಸಂಚು ಮಾಡಿಹರೊ
ಹಿರಿಯ ಗುರು ಬೋಧಕಳು ಆವ ದೇವತೆಯಿಹಳೊ
ಶಿಷ್ಯೆಯರು ಇಂತಿರಲು ಮಾತಾಯಿ ಎಂತಿಹಳೊ
ಇದ್ದಿದ್ದು ಆಕೆಗೇನಪರಾಧ ಮಾಡಿದೆವೊ !
ನಿನ್ನ ಗುಣವರಿತರಿತು ವಿಪರೀತವುಂ ನುಡಿದು
ಬಾಳಲಾರದೆ ತಾನು ಕೋಪದಿಂ ಶಾಪಮುಂ
ಕೊಟ್ಟ ತಾಪಸನನುದ್ದಾಲಕನ ಬುದ್ಧಿಯಂ
ದುರ್ಬುದ್ಧಿಯಂ ಜರೆದು ನಿನ್ನ ಮನ್ನಿಸರಮ್ಮ !
ಸೂರ್ಯೋದಯಕೆ ಚನ್ನಕೋವಳೆಯು ನಗಲೇನೊ
ಚಂದ್ರೋದಯಕೆ ಚನ್ನ ತಾವರೆಯು ನಗಲೇನೊ
ನಿಯಮ ಪಲ್ಲಟವಾಗಿ ಬೇರೊಂದು ವಿಧಿಯಾಗಿ

ಬೆಳಗಿದೊಡೆ ಸಾಲದೇಂ ? ನೀನಿಂದು ಬಾರಮ್ಮ !
ನಿನ್ನ ಸುಗುಣದ ಸಿರಿಯು, ನಿನ್ನ ಘನತರ ವಿಧಿಯು
ಈ ಹೆಂಗಳಿಗೆ ತೋರಿ ಗುಣವಂತೆಯೆನಿಸಮ್ಮ.
ಅವರಲ್ಪ ಸಂಸಾರವಂ ದುಃಖಸಾಗರವ
ನಿನ್ನೊಲುಮೆಯಂ ಬೀರಿ ಸುಖಜಲಧಿ ಮಾಡಮ್ಮ !
ಕಣ್ಣೀರ ಕೋಡಿಗಳು ಚಿಂತಾಗ್ನಿ ಸಂದಿಲ್ಲ
ಕಲಿತ ವಿದ್ಯೆಗಳಿಂದ ಅಜ್ಞಾನವಳಿದಿಲ್ಲ
ಲೋಕವಾಳಿದೊಡೇನು ಆಳಾಗಲೊಪ್ಪುವರು
ಶಾಂತಿ ದೊರೆತೊಡೆ ಸಾಕು, ಏನಾದಪಾಗುವರು ;
ಆಳಲ್ಲ ಅರಸಲ್ಲ ಏನುಮಂ ಸೈರಿಸರು
ಪತಿಯು ಬಾಳ್ಕೆಯು ಲತೆಗೆ ವಿಷವಾಗಿ ಹರಿಯುವರು
ಅವರ ಹರುಷದ ಗುಡಿಗೆ ಸಿಡಿಲಾಗಿ ಎರಗುವರು
ಈ ಹೆಂಗಳನು ಕೋಟಿ ಕೌಂಡಿನ್ಯರರಿದಪರೆ
ಬ್ರಹ್ಮಂಗೆ ರುದ್ರಂಗೆ ವಿಷ್ಣುವಿಂಗಳವಲ್ಲ !
ವಿಪರೀತೆಯಾದೊಡಂ ಗುಣವಂತೆ ನೀನಮ್ಮ
ಚಂಡಿಯೆನಿಸಿದೊರ್ಡಂ ಹದಿಬದೆಯು ನೀನಮ್ಮ
ವೇದಜಡ ಛಾಂದಸಂ ಸುಖಿಸಿದಂ ದೂರಿದಂ
ಅರೆಯಾಗಿ ಹೋಗೆಂದು ನೆವವಿಲ್ಲದುಸುರಿದಂ
ಲೋಕ ನಿನ್ನನು ಹಳಿದು ಮರುಗುವುದು ತಾಪಸಗೆ
ಲೋಕಮತವನು ನಚ್ಚಿ ಸಡೆಯೆಂದು ನುಡಿಯುವರು
ಎಂತು ನಚ್ಚುವುದೆಂತು ಮೆಚ್ಚುವುದು ವಿಪರೀತ
ಲೋಕಮಂ, ಎಂತು ನಡೆಯುವುದು ನಾನರಿಯೆನಮ್ಮ.

---

## ಜಾಣ–ಕೋಣ

"ಎಲ್ಲಾ ತಿಂಡಿಯೂ ನನಗೇ ಬೇಕು
ಎಲ್ಲಾ ಹಣ್ಣೂ ನನಗೇ ಬೇಕು
ಆರಿಗು ಚೂರನು ಗೀರನು ಕೊಡೆನು"
ಕೊಡೆನೆನ್ನುತ ಎಳಮಗ ಹಠಮಾಡಿದನು.

"ಅಣ್ಣನು ತಮ್ಮನು ಎಲ್ಲರು ಇರುವರು
ಅಕ್ಕನು ತಂಗಿಯೂ ಎಲ್ಲರು ಇರುವರು
ನಾನೂ ಅವ್ವಾ ಎಲ್ಲರು ಇರುವೆವು
ಒಂದಿಷ್ಟಿಷ್ಟನು ನಮಗೂ ಕೊಡಬೇಕು."

"ಆರಿಗು ಕೊಡೆನು ಎಲ್ಲವು ನನ್ನದು"
ಎನ್ನುತ ಎಳಮಗ ಹಠಮಾಡಿದನು ;
ಅಣ್ಣಾ ತಮ್ಮಾ ಅಕ್ಕ ತಂಗಿ
ಎವೆಯಿಕ್ಕದೆ ತಿಂಡಿಯ ನೋಡಿದರು.

ಅಪ್ಪನ ಕೈಹಿಡಿದೆಳೆಯುತ ಕೇಳುತ
ಎಳಮಗು ಕೈಯಿಂದೆಳೆಯಲು ಹೋಗಿ
ನನಗೇ ತನಗೇ ಎಂದಳುತಿರಲು
ತಂದೆಯು ಮಗನನು ಮುದ್ದಿಸಿ ಆಡಿದನು.

## ಕವಿಯ ಸೋಲು

"ಬಾರಲೆ ರನ್ನ !  ಹೊಳಪಿನ ಚಿನ್ನ !
ನಗುತಾ ಕೊಟ್ಟರೆ ನೀನೇ ಜಾಣ
ಅಳುತಾ ಕೊಟ್ಟರೆ ನೀನೇ ಕೋಣ
ಕೊಡದಿರೆ ನೀನೆನ್ನಯ ಮಗನಲ್ಲಣ್ಣ."

ಲೋಕದ ತಂದೆಯು ಮಗುವಿನ ತಂದೆಗೆ
"ಅಹುದೆಲೆ ಮಗನೇ !" ಎನುತಿಂತೆಂದನು
"ನಾ ಹೇಳಲು ಕಹಿ, ನೀ ಹೇಳಲು ಸಿಹಿ
ಎಲ್ಲಿಯು ನಡೆಸುವ ಮಕ್ಕಳು ಬಹುಕಡಮೆ.

ನಗುತಾ ಕೊಟ್ಟರೆ ಅವನೇ ಜಾಣ
ಅಳುತಾ ಕೊಟ್ಟರೆ ಅವನೇ ಕೋಣ
ಏನೋ ಎಂತೋ ಏನೂ ಕೊಡದಿರೆ
ಅವನೇನೂ ನನ್ನಯ ಮಗನಲ್ಲಣ್ಣ."

---

## ಮುಪ್ಪು

ದೇಹ ಗಳಿಯುತ್ತಿರಲು
ಮನಕೆ ಯೌವನವಯ್ಯ
ಮನಕೆ ಯೌವನವಿರಲು
ಆಸೆಗಳು ಹೆಚ್ಚುಯ್ಯ.

ಸಾಧಿಸುವ ಶಕ್ತಿಗಳು
ಭೋಗಿಸುವ ಶಕ್ತಿಗಳು
ಕುಂದುತ್ತ ಬರಬರಲು
ನೊಂದು ಸಾಯುವೆವಯ್ಯ.

ನರೆಸುಕ್ಕುಗಳ ನೋಡಿ
ಮೋಸ ಹೋಗಲು ಬೇಡ
ಮನಕೆ ಸುಕ್ಕುಗಳಿಲ್ಲ
ಹಿರಿಯತನ ಮುನ್ನಿಲ್ಲ.

ಸಾಯುವಾ ಕಾಲಕ್ಕೆ
ಎನಿತೊಂದು ಆಸೆಗಳು,
ಮುಂದಿನಾ ಜನ್ಮಕ್ಕೆ
ಎನಿತೊಂದು ಬಿತ್ತುಗಳು.

## ಕವಿಯ ಸೋಲು

ಆಡಿ ತೋರದೊಡೇನು
ಮಾಡಿ ತೋರದೊಡೇನು
ಮೂಡುತಿರೆ ಮನದಲ್ಲಿ
ಪಾಪ ವಾಸನೆಯಾಯ್ತು

ವಿಷಯಗಳ ಸುಖಕಿಂತ
ಹಿರಿಯ ಸುಖವೊಂದುಂಟು
ಗುರು ಕರುಣ ಬಂದಲ್ಲಿ
ಆ ಸುಖದ ತಿಳಿವುಂಟು

ಹಿರಿಯ ಸುಖ ಕಂಡಾಗ
ಮುಪ್ಪು ಬಂದಡಸುವುದು
ನಾಯಿಗಳು ಸಾಯುವುವು
ಮನವು ಬಯಲಾಗುವುದು.

ಮನಕೆ ಮುಪ್ಪಾಗದೆಯೆ
ಹಿರಿಯ ಸುಖ ತಾನಿಲ್ಲ
ಮನವೆ ಕರ್ಮದ ಮೂಲ
ಮನವನ್ನೆ ಕೊಲ್ಲುವುದು.

ಈ ಮುಪ್ಪು ಬಂದವರ
ಕಣ್ಣಿಟ್ಟು ಹುಡುಕುತಿರು
ಅವರ ನೆಲೆ ಸಿಕ್ಕಾಗ
ಹಿಂದೆಯೇ ನಡೆಯುತಿರು.

## ಕವಿಯ ಸೋಲು

ಮುಪ್ಪಿನಲಿ ಸುಖವುಂಟು
ಜವ್ವನದಿ ಕುಂದುಂಟು
ಮುಪ್ಪನ್ನು ಬಯಸುವುದು
ಶ್ರಮದಿಂದ ಸಾಧಿಪುದು.

---

# ಲಲಿತಾಂಗಿ

ತುಂಬು ಜವ್ವನದಬಲೆ
ಪತಿರಹಿತೆ ಶೋಕಾರ್ತೆ
ಕಾಡುಮೇಡನು ದಾಟಿ
ಭಯದಿಂದ ಓಡಿಹಳು
ಒಬ್ಬಳೇ ಓಡಿಹಳು
ಅಡಗಿಹಳು ಗುಹೆಯಲ್ಲಿ
ಬಾಲೆ ಲಲಿತಾಂಗಿ.

ಹುಲಿಕರಡಿಯೆಲ್ಲಿಹವೊ
ವಿಷಸರ್ಪವೆಲ್ಲಿಹವೊ
ಎಂದಾಕೆ ನಡುಗಿಹಳು
ನಡುಗಿ ಗುಹೆಯನು ಬಿಟ್ಟು
ಮುಂದೆ ಮುಂದೋಡಿಹಳು
ಮೈಮರೆತು ಓಡಿಹಳು
ಬಾಲೆ ಲಲಿತಾಂಗಿ.

ಹಿಂದೆ ನೋಡಿದರತ್ತ
ರಾವುತರು ಬರುತಿಹರು
ವೇಗದಿಂದಟ್ಟಿಹರು
ಹಗಲೆಲ್ಲ ಹಗಲೆಲ್ಲ
ಓಡಿಹಳು ಚೀರುತ್ತ
ಬೀಳುತ್ತ ಏಳುತ್ತ
ಬಾಲೆ ಲಲಿತಾಂಗಿ.

**ಕವಿಯ ಸೋಲು**

ದೀನ ರಕ್ಷಕನೆಂಬ
ಬಿರುದಿಂದು ದೇವಂಗೆ
ಎಂತು ಸಲುವುದೊ ಕಾಣೆ
ಆರಿಂದು ದೇವಿಯನು
ಚೆಲುವೆಯನು ಬಾಲೆಯನು
ಆರ್ತೆಯನು ಕಾಯುವರು
ದಂಡನಾಥನ ಮಡದಿ
ಲಲಿತಾಂಗಿ ದೇವಿಯನು.

ಕಂದಿಹಳು ಕುಂದಿಹಳು
ಗುರುತಿಪರು ಆರಿಲ್ಲ
ಬಿಟ್ಟ ಮಂಡೆಯು ಕೆದರಿ
ಮೈಯೆಲ್ಲ ಧೂಳಾಗಿ
ಉಟ್ಟ ಸೀರೆಯು ಹರಿದು
ಹೆದರಿ ಓಡುತಲಿಹಳು
ರಾಹು ಕೈ ಚಂದ್ರನೋ
ಗತಿಗೆಟ್ಟ ದೇವಿಯೋ
ರತಿಯೊಂದು ಪ್ರೇತವೋ
ಮಾನವಿಯು ಇವಳಲ್ಲ
ಹುಚ್ಚುರೂಪನು ತಾಳಿ
ಕಿಚ್ಚನೊಡಲಲಿ ತಾಳಿ
ವನದೇವಿ ಓಡಿಹಳು
ಚೆಲುವು ಕಣಿ ಓಡಿಹಳು
ದಂಡನಾಥನ ಮಡದಿ
ಬಾಲೆ ಲಲಿತಾಂಗಿ.

## ಕವಿಯ ಸೋಲು

ಕಲ್ಲು ಮುಳ್ಳನು ತುಳಿದು
ಕಾಲೆಲ್ಲ ಸಿಡಿಯುತಿದೆ
ಕೆನ್ನೀರು ಹರಿಯುತಿದೆ
ನಿಲಲಿಲ್ಲ ನಿಲಲಿಲ್ಲ
ಕಾಡೊಳಗೆ ನೆಲೆಯಿಲ್ಲ
ಆರ್ತರಿಗೆ ದಿಕ್ಕಿಲ್ಲ
ಓಡಿಹಳು ಲಲಿತಾಂಗಿ.

ಹೇಷೆಗಳ ಕೆಲೆವುಗಳು
ಖುರಪುಟದ ಸಪ್ಪಳವು
ರಾವುತರ ಕೇಕೆಗಳು
ಕಾಡಿನಲಿ ತುಂಬುತ್ತ
ಮಾರುದನಿ ತೋರುತ್ತ
ಖಗಕುಲವ ಹಾರಿಸಲು
ಮೃಗತತಿಯ ನೋಡಿಸಲು
ಓಡಿದುವು, ಓಡುತಿರೆ
ಬಾಲೆ ಲಲಿತಾಂಗಿ.

ಕನಕ ಪುತ್ತಳಿಯಂತೆ
ಸಿಂಗರದ ಸಿರಿಯಂತೆ
ಮಧುಮಾಸ ವನದಂತೆ
ಚೆಲ್ವಿನಿಂ ತೀವಿರುವ
ಪೆಣ್ಮಣಿಯು ಕೋಮಲೆಯು
ಮೇಲುಸಿರು ಸೂಸುತ್ತ
ಶಕ್ತಿಯದು ಕುಂದುತ್ತ

## ಕವಿಯ ಸೋಲು

ಬಾಯಾರಿ ಸೊರಗಿಹಳು
ತಲ್ಲಣಿಸಿ ನಿಂದಿಹಳು
ಬಾಲೆ ಲಲಿತಾಂಗಿ.

ಮರ ಮರದ ಮರೆಯಲ್ಲಿ
ನಿಂತು ನೋಡುತ ಬಾಲೆ
ರಾವುತರ ತಂಡವನು
ರಾಕ್ಷಸರ ತಂಡವನು
ಕುಸಿಯುತ್ತ ಮುಗ್ಗುತ್ತ
ಕಣ್ಣೀರು ತುಂಬುತ್ತ
'ಹೆಣ್ಣಾಗಿ ಹುಟ್ಟುವುದು
ರೂಪವತಿಯಾಗಿಹುದು
ಏರು ಜವ್ವನವಿಹುದು
ಕೇಡಿಂಗೆ ಕಾರಣವು'
ಎಂದಾಕೆ ಮರುಗುತ್ತ
ಭೀತಿಯಿಂದೋಡಿಹಳು
ದಂಡನಾಥನ ಮಡದಿ
ಬಾಲೆ ಲಲಿತಾಂಗಿ.

''ಎನ್ನ ಪತಿ ಕಣ್ಮುಚ್ಚಿ
ಪರದೇಶಿಯಾದೆನ್ನೈ
ಕಾಯುವರು ಆರಿಲ್ಲ
ನಿಷ್ಕರುಣಿಯಾಗದಿರು
ಎಲೆ ವಿಧಿಯೆ, ಬೇಡುವೆನು
ಈಗೆನ್ನ ತೊರೆಯದಿರು

ಅಹಿತರಿಗೆ ನೀಡದಿರು
ಬೇಡುವೆನು ದೈನ್ಯದಲಿ
ಮಾನರಕ್ಷಣಗೆ''
ಎಂದಾಕೆ ದುಃಖದಲಿ
ಕಣ್ಣೀರು ತುಂಬಿದಳು.
ಎರಡು ಚಣ ನಿಲ್ಲುತ್ತ
ಬೆವರನ್ನು ಬಸಿಯುತ್ತ
ಓಡಲಾರದೆ ನಿಂದು
ದೃಷ್ಟಿ ಹಿಂದಕೆ ಸಂದು
ಹಿಂದೆಯೇ ರಾವುತರು
ಹೆಜ್ಜೆ ಹೆಜ್ಜೆಯು ಬಿಡದೆ
ಮುಂಬರಿದು ಬರುತಿರಲು
ಮತ್ತೆ ಬಿಟ್ಟೋಡಿಹಳು
ಬಾಲೆ ಲಲಿತಾಂಗಿ.

ಭಯದಿಂದ ಓಡುತಿರೆ
ಓಡುತ್ತ ಬೀಳುತಿರೆ
ಸೂರ್ಯನುಂ ಬೀಳುತಿರೆ
ಹೊತ್ತು ಹೋಗುತ ಬಂತು
ಕಪ್ಪುಕವಿಯುತ ಬಂತು
ಅಲ್ಲಲ್ಲಿ ತಾರೆಗಳು
ಮೂಡಿದುವು ಮಿನುಗಿದುವು
ಮುಸಕಿನಲಿ ಮುಂದೊಂದು
ಹೆದ್ದೊರೆಯು ಕಾಣಿಸಿತು
ಹೆಬ್ಬಾವು ಕಾಣಿಸಿತು

ದಾರಿಯನು ಬಂಧಿಸಿತು.
ತುಂಬು ಹೊಳೆ ಮುಂದುಗಡೆ
ರಾವುತರು ಹಿಂದುಗಡೆ
ದಿಕ್ಕು ತೋರದೆ ನಿಂದು
ಕಣ್ಣು ಸುತ್ತುತ ಬಂದು
ಅರಿವು ಅಳಿಯುತ ಬಂದು
ಮುಂದೆ ಗತಿಯೇನೆಂದು
ತೊರೆ ಸಾವೆ ಮೇಲೆಂದು
ಹೆದ್ದೊರೆಯ ಮಾತೆಯನು
ದೈನ್ಯದಲಿ ಬೇಡಿದಳು
ದಂಡನಾಥನ ಮಡದಿ
ಬಾಲೆ ಲಲಿತಾಂಗಿ.

"ಎಲೆ ತಾಯೆ ! ಇಂಬುಗೊಡು
ಪೆಣ್ಣೊಡಲು ಇಂಬುಗೊಡು
ಶರಣಾಗಿ ಬಂದಿಹೆನು
ಗತಿಗೆಟ್ಟು ಬಂದಿಹೆನು
ಮಾನವನು ಬಿಡಲಮ್ಮೆ
ಜೀವದಿಂದಿರಲಮ್ಮೆ
ಮಾನಾಪಹಾರಿಗಳು
ದುಷ್ಟ ರಾವುತರವರು
ದುಷ್ಟ ರಾಜನ ದಂಡು
ಹಿಂದಟ್ಟಿ ಬರುತಿಹರು
ಎನ್ನ ಪಾಲಿಪರಿಲ್ಲ
ಎನ್ನ ಮೊರೆ ಬಯಲಾಯ್ತು

ಕಷ್ಟದಿಂ ಕಂಗೆಟ್ಟೆ
ಊರು ಮನೆಯನು ಬಿಟ್ಟೆ
ಕಾಡಿನಲಿ ಬೇಸತ್ತೆ
ಆರ್ತರಿಗೆ ದಿಕ್ಕಿಲ್ಲ
ಭೂತನಾಥನ ಸೇವೆ
ಭುವನೇಶ್ವರಿಯ ಸೇವೆ
ಇಂದಿನಲಿ ಬರಿದಾಯ್ತು
ದಂಡನಾಥನ ಮಡದಿ
ಇಂದು ಈ ಗತಿಯಾಯ್ತು !
ಎಲೆ ತಾಯೆ ಇಂಬುಗೊಡು
ಪೆಣ್ಣೊಡಲು ಇಂಬುಗೊಡು
ಬಂದಿಹೆನು ಶರಣಾಗಿ ''
ಎಂದಬಲೆ ಬೇಡಿದಳು
ಕಣ್ಣೀರು ಸುರಿಸಿದಳು
ಬಾಲೆ ಲಲಿತಾಂಗಿ.

''ಬಾ ಮಗಳೆ ! ಬಲು ಬಳಲಿ
ಬಸವಳಿದು ಬಂದೆ, ಬಾ !
ಮಾನವನು ಕಾಯುವೆನು
ಕೀರ್ತಿಯನು ಸಾರುವೆನು
ನೊಂದ ಜೀವವ ಸಲಹಿ
ತಣ್ಪಿನೊಳು ಸೈತಿಟ್ಟು
ಸಂತೈಸಿ ಪೊರೆಯುವೆನು ''
ಎಂಬೊಂದು ಮೃದು ಮಧುರ
ಭಾಷಣವು ಕೇಳಿಸಿತು

ಕೇಳುತಿರೆ ಭೀತಿಯಲಿ
ಬಾಲೆ ಲಲಿತಾಂಗಿ.

ತಿರುಗಿ ನೋಡಿದಳೊಮ್ಮೆ
ನಡುಗಿದಳು ಮಗುದೊಮ್ಮೆ
ಮುಂದೆ ನೋಡಿದಳೊಮ್ಮೆ
ಭೀತಿಯಿಂ ಕಡೆಗೊಮ್ಮೆ
ಒಂದೆ ನಿಮಿಷದ ಆಯು
ಮರುಚಣವೆ ಕತ್ತಲೆಯು
ಬಿಮ್ಮೆಂಬ ಕತ್ತಲೆಯು
ಕತ್ತಲೆಯ ಹೆಗ್ಗವಿಯು
ಏನಿಹುದೊ ಎಂತಿಹುದೊ !
ಹೆದರಿದಳು ನಡುಗಿದಳು ;
ಜೀವವಾಹಿನಿಯಲ್ಲ
ಜೀವಾಪಹಾರಿಣಿಯು
ನೀಲ ಮೃತ್ಯುಚ್ಛಾಯೆ
ಕಾಲಪಾಶಚ್ಛಾಯೆ
ನೋಡಿದಳು ನಡುಗಿದಳು ;
ಮುಂದಿಹುದು ತೊರೆ ಸಾವು
ಮಾನದಿಂದಾ ಸಾವು
ಎದೆಗೆಡಲು ಬಾಳುಂಟು
ಏ ಬಾಳೊ ! ತೆಗೆಯೆಂದು
ಎದೆ ಗಟ್ಟಿಮಾಡಿದಳು
ಹೆದ್ದೊರೆಯ ನೋಡಿದಳು
ಬಾಲೆ ಲಲಿತಾಂಗಿ.

ಮಾಸವನೆ ಬಯಸುತ್ತ
ತನ್ನ ಕತೆ ನೆನೆಯುತ್ತ
ದುಃಖದಿಂ ತುಂಬುತ್ತ
ನರಪತಿಗೆ ಮುನಿಯುತ್ತ
"ಪರರೊಡವೆ ಬಯಸುವರು
ಪರವಧುವ ಕೋರುವರು
ಲೋಕ ಕಂಟಕರಿವರು
ವಂಶವಿದು ಬೆಳೆಯದಿರಲಿ;
ಕ್ರೂರ ಶತ್ರುಗಳಿವರ
ರಾಜ್ಯದೈಸಿರಿ ಪಿಡಿದು
ಭೋಗ ಭಾಗ್ಯವ ಪಿಡಿದು
ಇವರ ಮಡದಿಯರೊಡವೆ
ಇವರ ಮಡದಿಯರುಡುಗೆ
ಸುಲಿಸುಲಿದು ಪೊರಡಿಸಲಿ
ಗತಿಗೆಡಿಸಿ ನರಳಿಸಲಿ
ಎನ್ನೊಡಲ ಕಷ್ಟಗಳು
ಎಂದೆಂದು ಮರೆಯದಿರಲಿ"
ಎಂದು ಬಿರುನುಡಿ ನುಡಿದು
ಕಣ್ಣೀರು ಹರಿಯುತಿರೆ
ತುಂಬು ಹೊಳೆ ಹರಿಯುತಿರೆ
ದುಃಖ ಮೂರ್ಛಿತೆಯಾಗಿ
ಕ್ರೋಧ ಮೂರ್ಛಿತೆಯಾಗಿ
ಶಪಿಸಿದಳು ಬಾಲೆ
ತುಂಬು ಹೊಳೆ ಪಾಲಾಗಿ
ಬಿದ್ದಳಾ ಬಾಲೆ.

### ಕವಿಯ ಸೋಲು

ಕಾರ್ಮೋಡ ತಂಡಗಳು
ಸಿಡಿಲು ಕಿಡಿಗಳ ಸೂಸಿ
ಸಭದಲ್ಲಿ ಗಜರಿದವು
ಬೆಟ್ಟಗಳು ಮೊಳಗಿದವು
ಭೂಮಾತೆ ನಡುಗಿದಳು
ಕತ್ತಲೆಯು ಮೊತ್ತದಲಿ
ಕಾಳರಕ್ಕಸಿ ರೂಪು
ದೆಸೆದೆಸೆಗೆ ಮೂಡಿದುದು
ಪರರೊಡವೆ ಬಯಸುವರ
ಕಬಳಿಸುವ ತೆರದಲ್ಲಿ.

ಇಲ್ಲೊಮ್ಮೆ ಮುಳುಗಿದಳು
ಅಲ್ಲೊಮ್ಮೆ ತೇಲಿದಳು
ಬಂಡೆಯನು ತಾಗಿದಳು
ಸಾವೆಂದು ಕೂಗದೆಯೆ
ಭಯವೇನು ಇಲ್ಲದೆಯೆ
ತೇಲಿದಳು ಮುಳುಗಿದಳು ;
ಕೊಚ್ಚಿಹೋದಳು ದೂರ
ಪಾಪಿ ನೆಲದಿಂ ದೂರ
ಮುಳುಗಿದಳು ತೇಲಿದಳು ;
ಸುಳಿಯಲ್ಲಿ ಸಿಕ್ಕಿದಳು
ಸುಳಿಯೊಡನೆ ಸುತ್ತಿದಳು
ಬಿಟ್ಟ ಮುಂಡೆಯು ಚೆದರಿ
ಉಟ್ಟ ಸೀರೆಯು ಉಬ್ಬಿ
ಸುತ್ತುತ್ತ ಇಳಿಯುತ್ತ

## ಕವಿಯ ಸೋಲು

ಚೆಲುವು ಮುಖ ತಿರುಹುತ್ತ
ತಣ್ಪೀವ ತಾಯಿಯನು
ನೆರೆಪೊರೆವ ತಾಯಿಯನು
ತೆಕ್ಕೆಯಲಿ ಬಿಗಿದಪ್ಪಿ
ನಲ್ಮೆಯಿಂ ಕಣ್ಮುಚ್ಚಿ
ಮೆಲುಮೆಲನೆ ಇಳಿದಿಳಿದು
ನರಲೋಕದತ್ತಣಿಂ
ಮರೆಯಾಗಿ–ಮರೆಯಾಗಿ,
ಪಾಪಿಗಳ ಕಾಮುಕರ
ಕಣ್ಣಿಂದ ಮರೆಯಾಗಿ–
ಜಲದೇವಿಯುದರದೊಳು
ಅಡಗಿ ಹೋದಳು ದೇವಿ
ದಂಡನಾಥನ ಮಡದಿ
ಚೆಲುವೆ ಲಲಿತಾಂಗಿ.

---

## ಪಾತ್ರಗಳು

---

೧. ಕವಿರಾಜ

೨. ಘೂಕರಾಜ

# ಕವಿಯು ಸೋಲು

(ಏಕಾಂಕ ನಾಟಕ)

[ಕವಿಯ ಮನೆ ಬೆಳಗಿನ ಜಾವ. ಕವಿ ತನ್ನ ಕೊರಡಿಯಲ್ಲಿ ಮಂಚದ ಮೇಲೆ ಮಲಗಿರುವನು. ಮನೆಯು ಪೂರ್ವಾಭಿಮುಖವಾಗಿದೆ; ಕೊರಡಿಯ ಕಿಟಕಿಗಳು ಉತ್ತರಾಭಿಮುಖವಾಗಿವೆ. ಎರಡೇ ಕಿಟಕಿಗಳಿರುವುವು. ಸುಮಾರು ನಾಲ್ಕು ಅಡಿ ಉದ್ದ ಮೂರಡಿ ಅಗಲ ಒಂದೊಂದಕ್ಕೂ ಮೇಲಿನ ಬಾಗಿಲು ಕೆಳಗಿನ ಬಾಗಿಲು ಎಡ ಬಲ ಭಾಗಗಳಲ್ಲಿ ಇರುವುವು. ಕೊರಡಿಯ ಉದ್ದ ೧೨ ಅಡಿಗಳು, ಅಗಲ ೧೦ ಅಡಿಗಳು, ಎತ್ತರ ೧೦ ಅಡಿಗಳು. ಒಳಗಡೆ ವಿದ್ಯುತ್ತಿನ ದೀಪ ಉರಿಯುತ್ತಿದೆ. ಕವಿಯು ಮಂಚದಮೇಲೆ ಒಬ್ಬನೇ ಮಲಗಿದ್ದಾನೆ. ಮಂಚ ೬॥ ಅಡಿ ಉದ್ದ, ೩॥ ಅಡಿ ಅಗಲವಿದೆ ತಲೆಯ ಭಾಗದಲ್ಲಿ ಕವಿಯು ತಾನು ಬರೆದ ಕವಿತೆಗಳನ್ನೆಲ್ಲ ಸೇರಿಸಿ ಇಟ್ಟಿರುವನು. ಹಿಂದಿನ ಸಾಯಂಕಾಲ ಹೆಚ್ಚಾಗಿ ಕಾಫಿ ಕುಡಿದದ್ದರಿಂದ ಕವಿಗೆ ಸರಿಯಾಗಿ ನಿದ್ರೆ ಬಾರದೆ ಆಗಾಗ ಹೊರಳುತ್ತಿರುವನು. ಮನೆಯ ಮುಂಭಾಗದ ಮರದ ಮೇಲೆ ಘೂಕರಾಜನು ಅಸಮಾಧಾನದಿಂದ ಬಂದು ಕುಳಿತಿರುವನು. ಕೊರಡಿಯ ಕಿಟಕಿಗಳು ಮುಚ್ಚಿರುವುದರಿಂದ ಎರಡು ಬಾರಿ ಕೂಗುವನು. ಕವಿ ಎದ್ದು ಕಿಟಕಿಯೊಂದನ್ನು ತೆಗೆದು ನೋಡಿ, ಪುನಃ ಮಲಗಿಕೊಳ್ಳುವನು. ಆಗ ಘೂಕರಾಜನು ಕೂಗುವನು, ಮಾತಿಗಾರಂಭ ಮಾಡುವನು.]

ಘೂ. ರಾ.— ಹೊತ್ತಾಯಿತೇಳಯ್ಯ ಸಾಕು ನಿನ್ನಯ ಗರ್ವ,
ಎನಗೆ ಉತ್ತರಕೊಟ್ಟು ಬಳಿಕ ನೀ ಮಲಗಯ್ಯ.

ಕವಿ ರಾ.— ಅರುಣೋದಯಕೆ ಮುನ್ನ ಕೂಗುವನು ಆರಿವನು ?

ಘೂ. ರಾ.— ನಾ ಬರುವೆನೆಂದರಿದು ಪಾಪಿ ರವಿಯಂದದಲಿ
ಹೆದರಿ ಹಾಸಿಗೆ ಹಿಡಿವೆ; ನಾ ತೆರಳೆ, ಧೈರ್ಯದಿಂ
ಬಿಟ್ಟಿದ್ದ ರಾಗವಂ ಬೀರುತಿಹೆ! ಏನಯ್ಯ
ಲಜ್ಜೆಯಿಲ್ಲದ ಬಾಳು.

ಕವಿ ರಾ.— ನಿದ್ದೆಗಣ್ಣಾಗಿಹುದು,
ಮಂಜು ತೆರೆ ಮರೆಯಲ್ಲಿ ಕಾಂಬಂತೆ ಕಾಣುವುದು.
ನೀನೊಳಗೆ ಬಾರಯ್ಯ.

**ಘೂ. ರಾ.—** ಪರಮಪಾತಕ ನೀನು!
ರವಿಯ ಮರಿಗಳ ತಂದು ಅವರ ಮಧ್ಯದಿ ನಿಂದು
ಏನೆನ್ನ ಕರೆಯುವೆಯೊ, ಆದರವ ತೋರುವೆಯೊ!
ಸಾಯೆ ಸರಸಂ ಸಾಕು, ದುರ್ಬುದ್ಧಿಯದು ಸಾಕು
ನಿನ್ನ ಮನೆ ಹೊಗಲೊಲ್ಲೆ. ನಿರಪರಾಧಿಗಳಾವು,
ಎಮ್ಮನೀ ಹಳಿದಿರುವೆ ಅಪಮಾನ ಮಾಡಿರುವೆ.
ಹೇಳಯ್ಯ, ಕಾದ ಸೀಸವನೆಂದು ಸುರಿದೆವೋ
ನಿನಗೆ ಕೆಡಕೇನು ಮಾಡಿರುವೆವೋ ಹೇಳಯ್ಯ.
ತಲೆಯೇಕೆ ಕೆರೆಯುವೆಯೊ ಮೇಲೇನು ನೋಡುವೆಯೊ
ಕಣ್ಣುಗಳನೇಕುಜ್ಜುವೆಯೊ, ಅರಿಯದಂತೇಕೆ
ನಟಿಸುವೆಯೊ ಆಷಾಢಭೂತಿಯೆಂಬುದ ಬಲ್ಲೆ.

**ಕವಿ ರಾ.—** ನಿಮ್ಮ ನಾನೆಂದು ಹಳಿದೆನೊ? ನಿಮಗೆ ನಾನೆಂದು
ಅಪಮಾನ ಮಾಡಿದೆನೊ? ನೆನಪಿಲ್ಲ, ನೆನಪಿಲ್ಲ.
ನೀನಾರೊ ಮೊದಲೆನಗೆ ತಿಳಿದಿಲ್ಲ. ಆರಯ್ಯ?

**ಘೂ. ರಾ.—** ಅಹುದಹುದು ನೆನಪಿಲ್ಲ! ಏಕಿರುವುದೋ ನಿನಗೆ!
ಏನಾನುಮೊಂದು ಉಪಕಾರವಂ ನೀ ಮಾಡೆ
ಬಹುಕಾಲ ನೆನಪಿಹುದು; ದಿಟವಯ್ಯ. ದಿನ ದಿನವು
ಲೆಕ್ಕವಿಲ್ಲದ ರೀತಿ ಅಪಕಾರ ಮಾಡುತಿರೆ
ನೆನಪಿಲ್ಲ! ನೆನಪಿಲ್ಲ! ದುಷ್ಟ ಮಾನವ ಜನ್ಮ!
ಪಕ್ಷಿಗಳು ನಾವು ನಿಮ್ಮಂತಲ್ಲ.

**ಕವಿ ರಾ.—** ಏಕಯ್ಯ
ಬಲು ಮುನಿಸು? ನೆನಪಾಗದೆಂದು ದಿಟ
ನುಡಿಯುತಿರೆ ಏನೇನೊ ಆಡುತಿಹೆ, ದೂರುತಿಹೆ.

**ಘೂ. ರಾ.—** ರಕ್ತೋಪವನವನ್ನು ನಾವೆಲ್ಲ ಬಿಟ್ಟಿಹೆವು.
ನೀನವರ ನಮಗೆ ಹೋಲಿಸಬಹುದೆ? ಹೇಳಯ್ಯ.

ಕವಿ ರಾ.— ಅಹ್ಹಹಾ! ನೆಸಪಾಯ್ತು! ಬಂದಿರುವನಾರೆಂದು
ಅರಿವಾಯ್ತು. ಭಾಗ್ಯದೇವತೆ ನೀನು ಬಂದಿರುವೆ
ದಯವಿಟ್ಟು ಬಾರಯ್ಯ.

ಘೂ. ರಾ.— ಇವಗೆಷ್ಟು ಸಂತೋಷ!
ಪಾಪಕಾರ್ಯವ ಮಾಡಿ ನಲಿಯುತಿಹ ರಾಕ್ಷಸನು!

ಕವಿ ರಾ.— ಈ ಕವಿಯ ಮಂದಿರವ ಪಾವನವ ಮಾಡಯ್ಯ.

ಘೂ. ರಾ.— ಕವಿರಾಜ! ಭಾಪುರೇ!

ಕವಿ ರಾ.— ಎನ್ನ ದೊರೆ ಚಿತ್ತವಿಸು,
ನಿನ್ನ ನುಡಿ ದಿಟವಕ್ಕೆ ಚಿತ್ತವಿಸು. ಅವರಲ್ಲಿ
ಕುಳಿತಿರಲು ಕಂಡಂತೆ ಆಡಿದೆನು. ನಿಮಗೇಕೆ
ಕೋಪವೆಂಬುದನರಿಯೆ ಅಪಮಾನವೇನಾಯ್ತೋ
ನಾನರಿಯೆ.

ಘೂ. ರಾ.— ಹಸುಗೂಸು! ನೀನರಿಯೆ! ಎಂತರಿವೆ!
ಕಿವಿಯಲ್ಲಿ ಕೇಳಿದೆವು ಮನದಲ್ಲಿ ಕೊರಗಿದೆವು
ಬೆಳಕು ಕಂಡಂತೆ ಸಂಕಟವಾಯ್ತು, ಬಸಿರೆಲ್ಲ
ಕುದಿಯಾಯ್ತು.

ಕವಿ ರಾ.— ಕಂಡಂತೆ ಆಡಿದರೆ ತಪ್ಪಾಯ್ತೆ?

ಘೂ. ರಾ.— ಕಂಡಂತೆ ಆಡಿದೆಯ? ಸಟೆಯ ಹೇಳುವೆಯೇಕೊ?
ಕವಿಯೆಂಬ ಹುಚ್ಚಿನಲಿ ಬಂದಂತೆ ಆಡುವುದೆ?
ಅವರಂತೆ ನಮಗೇನು ನರೆತ ಹುಬ್ಬುಗಳಿವೆಯೆ?
ಅವರಂತೆ ಕಣ್ಣುಗಳು ಪಾತಾಳಕಿಳಿದಿವೆಯೆ?
ಅವರಂತೆ ಗೂನುಬೆನ್ನಲಿ ಕುಳಿತು ಮಡಕೆಯಲಿ
ಕಲ್ಲನಾಡಿಸುವಂತೆ ಮಾತನೇನಾಡುವೆವೆ?

ಎಮ್ಮ ಹೆಸರೆತ್ತಿ ಹೋಲಿಸಬಹುದೆ? ಶಿವ ಶಿವಾ!
ನಮಗಾದ ಅಪಮಾನ ಮತ್ತಾರಿಗೂ ಬೇಡ.
ಮಾಡಬಹುದೇಸಯ್ಯ? ಇದು ಧರ್ಮವೇಸಯ್ಯ?
"ಚಿನ್ನದಾ ನಾಡಿನಲಿ" ಹುಟ್ಟಿ ಬೆಳೆದವರಾವು
"ಗಂಧದಾ ಗುಡಿಯಲ್ಲಿ" ಹೆಜ್ಜೆಗಲಿತವರಾವು
"ಬೀಣೆಯಾ ಬೆಡಗಿನಲಿ" ಒಡನಾಡಿದವರಾವು
ಬ್ರಾಹ್ಮಣಗೆ ಲಕ್ಷ್ಮಿಯಂ ಒಲಿಸಿಕೊಟ್ಟವರಾವು
ಕಾಶ್ಯಪನು ದಾಮ್ರಿಯುಂ ತಂದೆತಾಯಿಗಳೆಮಗೆ
ನೆಲಸಿತ್ತು ನಮ್ಮಲ್ಲಿ ಬುದ್ಧಿಯುಂ ಸತ್ಯವುಂ
ಸಂಗೀತ ಸಾಹಿತ್ಯ ಚೌಷಷ್ಠಿ ಕಲೆಗಳುಂ
ಲೋಕದೊಳು ನಮ್ಮಂತೆ ಪಂಡಿತರು ಇಲ್ಲಯ್ಯ.
ನಾರದಗೆ ಸಂಗೀತ ವಿದ್ಯೆಯಂ ಬೋಧಿಸಿದ
ಗಾನಬಂಧುವು ಎಮ್ಮ ಕುಲಜನಾಗಿಹನಯ್ಯ.
ವಿಷ್ಣುಶರ್ಮನ ಕಥೆಯು ಪಂಚತಂತ್ರದ ಕಥೆಯು
ಎಮ್ಮಿಂದ ಬೆಳೆಯಿತ್ತು, ಅದರ ಕಳೆಯೇರಿತ್ತು.
ಸಂಗೀತ ಸಾಹಿತ್ಯ ನಿಪುಣರಲ್ಲದೆ, ರಾಜ
ನೀತಿಯಲಿ ಮುಂಚಿದವರಾರುಂಟು ಹೇಳಯ್ಯ.
ಮಲಯಕೇತುವಿನಯ್ಯ ಪರ್ವತಾಧಿಪನ ಬಳಿ
ಎಮ್ಮ ಹೆಸರವನೊಬ್ಬ ಮಂತ್ರಿತನ ಮಾಡಿದನು
ಶತ್ರುಮಂಡಲಕೆಲ್ಲ ಕಗ್ಗವ್ಪ ಕವಿಸಿದನು
ಸಚಿವರಲಿ ಆತನೇ ನಚ್ಚಿಕೆಗೆ ಮೆಚ್ಚಿಕೆಗೆ
ಹೆಸರಾಗಿ ಗುಹೆಗೆ ಕತ್ತಲೆಯಂತೆ ಮೆರೆದನಯ್ಯ.
ಮತ್ತೆ ನೀಂ ಕೇಳಯ್ಯ. ಇರುಳಲ್ಲಿ ನಿಮ್ಮೂರ
ತೋಟಿಗಳು ತಳವಾರರಲ್ಲಲ್ಲಿ ತೂಕಡಿಸಿ
ನಿದ್ದೆಗೈಯುತ್ತಿರಲು, ಕಳ್ಳಬಂಟರು ಬಂದು

ಹೊಂಚುತಿರೆ, ಕೂಗುವೆವು ಕಾಹಿನವರಂದದಲಿ
ಎಚ್ಚರದಿ ತಿರುಗುವೆವು; ಅಪಶಕುನವಾಯ್ತೆಂದು
ಹೆದರಿಯೋಡುವರವರು. ಉಪಕಾರವಿಷ್ಟಿರಲು
ಸುಟ್ಟ ಮಾನವ ಜಾತಿ ಉಪಕಾರವೆಣಿಸುವುದೆ!

ಕವಿ ರಾ.— ಮುಂಗಾರ ಮೊದಲ ಮಳೆ ಜಿರ್ರೆಂದು ಸುರಿವಂತೆ
ಆಲಿಕಲ್ಗಳ ಮಳೆಯು ರಪರಪನೆ ಹೊಡೆವಂತೆ
ಎಡೆಬಿಡದೆ ನೀಯೆನ್ನ ತಲೆಮೇಲೆ ಮಾತುಮಳೆ
ಹೊಡೆಯುತಿಹೆ. ಎನ್ನ ದೊರೆ! ಶಾಂತಿಯಂ ತಾಳಯ್ಯ.
ನಾನೆರಡು ಮುತ್ತುಗಳನಾಡುವೆನು ಕೇಳಯ್ಯ.

ಘೂ. ರಾ — ಮುತ್ತುಗಳೆ! ಭಾಪುರೇ! ಕವಿರಾಜ!

ಕವಿ ರಾ.— ಎನ್ನ ದೊರೆ!
ನಿನ್ನ ನುಡಿ ಹಿರಿಯ ನುಡಿ ಫಲಿಸುವುದು. ಎನ್ನ ನುಡಿ
ಚಿತ್ತವಿಸು, ನಿಮಗೆ ನಾನಪಕಾರ ಮಾಡಿದೆನೆ?
ನಿಮಗಲಂಕಾರಮಂ ನಮಗಲಂಕಾರಮಂ
ನಲ್ಮೆಯಿಂದಾಡಿದೆನು; ಹಳಿವೆಣಿಕೆ ಎನಗಿಲ್ಲ
ಮೆಚ್ಚುನುಡಿಯಾಡಿದೆನು; ನಿಮ್ಮ ಉಪಕೃತಿ ಹಿರಿದು
ನಿಮ್ಮ ದೆಸೆಯಿಂದೆಮಗೆ ಉಪಮಾನ ದೊರೆಯಿತ್ತು.

ಘೂ. ರಾ.— ಉಪಮಾನ ನಿಮಗಾಯ್ತು, ಅಪಮಾನ ನಮಗಾಯ್ತು
ಆಡಿ ಫಲವೇನಯ್ಯ ಬಣ್ಣನೆಯ ಕೊಂಕು ನುಡಿ;
ರಕ್ತೋಪವನವನ್ನು ಬಿಟ್ಟಿಹೆವು, ಇನ್ನೀಗ
ಈವೂರು, ಈ ದೇಶ ಎಲ್ಲವಂ ಬಿಡಲಿಹೆವು.

ಕವಿ ರಾ.— ಅರಸು ಮುನಿದರೆ ತಿಳುಹುವುದು ಕಷ್ಟ. ಹೇಳೆನ್ನ
ದೊರೆಯೆ! ನೀನಿಂತು ಮುನಿದರೆ ನಾನು ಬದುಕುವೆನೆ?
ಒಲುಮೆಯಿಂ ಎರಡು ನುಡಿ ಕೇಳಯ್ಯ ತಪ್ಪಾಯ್ತು.

ಘೂ. ರಾ.— ಎರಡು ನುಡಿ ಕೇಳಾಯ್ತು, ಎಲ್ಲವುಂ ಕೇಳಾಯ್ತು
ತಡಮಾಡಿ ಫಲವಿಲ್ಲ, ಇನ್ನೆನಗೆ ಹೊತ್ತಾಯ್ತು
ಆಗಲೇ ಪಾಪಿ ಸೂರ್ಯನು ರಕ್ತವಂ ಕಾರಿ
ಹರಣ ಬಿಡುತಿಹನಲ್ಲಿ.

ಕವಿ ರಾ.— ತಪ್ಪನೆಸಗಿದೆನಯ್ಯ.
ತಪ್ಪನೊಪ್ಪಿದಮೇಲೆ ಮನ್ನಿಪುದು ಹಿರಿಯತನ
ನೀನೆನ್ನ ಮನ್ನಿಪುದು, ದಯೆಯಿಂದ ಮನ್ನಿಪುದು.
ಊರನೇಂ ಬಿಡಬೇಡಿ, ದೇಶವಂ ಬಿಡಬೇಡಿ
ರಕ್ಷೋಪವನದಲ್ಲಿ ಮತ್ತೆ ನೀವೈತಂದು
ದರ್ಶನವ ಕೊಡಿರಯ್ಯ, ನಿಮ್ಮ ಬೇಡುವೆನಯ್ಯ.
ಒಂದೊಂದು ಉಪಮಾನ ಒಂದೊಂದಲಂಕಾರ
ನಾನು ಹೇಳುತ್ತಿರಲು ಒಂದೊಂದು ಜಾತಿಯುಂ
ಕೋಪದಿಂ ಬಿಡುತಿರಲು ನಾಡು ಬಯಲಾಗುವುದು.
ಅಲ್ಲಿದ್ದ ಸಿಂಹ ಹುಲಿ ನರಿ ಕರಡಿಗಳನೆಲ್ಲ
ಇಂತೆಯೇ ಧೂರ್ತತನದಲಿ ಕಳೆದುಕೊಂಡಿಹೆವು
ಕಡೆಗಲ್ಲಿ ಕಾಡುಕಪಿಯುದುಮಿಲ್ಲ ಕುರಿಯಿಲ್ಲ
ಕಾಡುಮನುಜನುಮಿಲ್ಲ, ಎಲ್ಲವುಂ ಬಯಲಾಯ್ತು;
ನೀವಾದೊಡಂ ಅಲ್ಲಿ ನೆಲಸಿದ್ದು ಆಗಾಗ
ದರ್ಶನವ ಕೊಡುತೆಮಗೆ ಸಂತಸವ ಬೀರುತಿರಿ
ಬಿಟ್ಟೆಮ್ಮ ಹೋಗದಿರಿ ಕಾಲೂರಿ ಬೇಡುವೆನು;
ಬಂಧುಗಳು ಬಳಗಗಳು ನೀವೆಲ್ಲ ಹೋಗುತಿರೆ
ನಾಡಿನಲಿ ಚೆಲುವುಂಟೆ ಗೆಲುವುಂಟೆ ಸುಖವುಂಟೆ?

ಘೂ. ರಾ.— ಎಲ್ಲರರಿವಂತೆ ನೀನಪಮಾನ ಮಾಡಿರುವೆ
ಸಾಕ್ಷಿಗಳು ಆರಾರು ಇಲ್ಲದಿರೆ ನೀನೆನ್ನ

ಕಾಲ್ಪಿಡಿದು ಬೇಡುತಿಹೆ.

**ಕವಿ ರಾ.—** ಮುನಿಸಿನ್ನು ಬೇಡಯ್ಯ.
ಕಾಲ್ಪಿಡಿದು ಬೇಡಿರುವ ವಿಷಯವಂ ಜಗಕೆಲ್ಲ
ತಿಳಿವಂತೆ ಮುದ್ರಿಪೆನು ; ಓದುವವರಾರುಂಟು
ಅವರ ಕೈಯಲಿ ಕೊಟ್ಟು ಎಲ್ಲರಿಗೆ ತಿಳಿಸುವೆನು ;
ಬೀದಿ ಬೀದಿಯ ಹೊಕ್ಕು ಡಂಗುರವ ಹಾಕುವೆನು ;
ಪತ್ರಿಕೆಗಳೆನಿತುಂಟೊ,—ದಿನ ದಿಸದ ಪತ್ರಿಕೆಯು
ವಾರ ವಾರದ ಪತ್ರಿಕೆಯು, ಮಾಸಪತ್ರಿಕೆಯು
ಅದಕೆಲ್ಲ ಕಳುಹುವೆನು ; ಮೂರು ತಿಂಗಳಿಗೊಮ್ಮೆ
ತಡೆತಡೆದು ಮೂರು ವರ್ಷಕ್ಕೊಮ್ಮೆ ಬರುತಿರುವ
ಪತ್ರಿಕೆಗಳಾದೊಡಂ ಹುಡು ಹುಡುಕಿ ಕಳುಹುವೆನು.
ಎಲ್ಲರುಂ ಹೊಗಳುವರು ಎನ್ನ ದೊರೆ! ನಿನಗೇನು
ನಾಡಲ್ಲಿ ಹೊಗಳಿಕೆಯೆ ತುಂಬಿಹುದು. ಹೇಳಲೇಂ
ಕೇಳಲೇಂ! ಮುಗಿಲನ್ನು ಮುಟ್ಟಿಸುವ ಹೊಗಳಿಕೆಯು
ಸಗ್ಗಕ್ಕೆ ಏರಿಸುವ ಹೊಗಳಿಕೆಯು, ತಾರೆಗಳ
ಸೂಡಿಸುವ ಚಂದ್ರನಂ ಚುಂಬಿಸುವ ಹೊಗಳಿಕೆಯು
ಮೇರುಮಂದರಗಳಿಗೆ ತೂಗು ಉಯ್ಯಲೆ ಕಟ್ಟಿ
ತೂಗುವಾ ಹೊಗಳಿಕೆಯು. ಎನ್ನ ದೊರೆ! ಈಯೆನ್ನ
ನಾಡಿನಲಿ ನಿನ್ನ ಹೊಗಳದರುಂಟೆ? ಏನಿಲ್ಲ
ವೆಂದೊಡಂ ಚಾಮುಂಡಿಗೇರಿಸಲಿ, ಶಿವಗಂಗೆ
ಸಾಕೇಳು. ಅವರಾರು ಹೊಗಳದಿರ್ದೊಡೆಯೇನು?
ಏನು ಗತಿ? ಎನ್ನದಿರು. ಬೇರೊಂದು ಹೆಸರಿನಲಿ
ನಾ ಹೊಗಳಿ ಕೈಲಾಸಕೇರಿಸುವೆ, ಅಲ್ಲದೊಡೆ
ವೈಕುಂಠಕೇರಿಸುವೆ, ಸಂಕೋಚ ಬೇಡಯ್ಯ.
ನೀನೊಮ್ಮೆ ಮಂದಹಾಸವ ಸೂಸಿ ಎನ್ನ ಗೃಹ

ಬೆಳಗಯ್ಯ. ನಿನ್ನ ಮನಸದಣಿವಂತೆ ಬಣ್ಣಿಸಲೆ?

(ಘೂಕರಾಜನು ಎಳನಗೆಯನ್ನು ಮಿತವಾಗಿ ನಗುವನು.)

ಸಪ್ತಪಾತಾಳದಲಿ ಕಗ್ಗವಿಯ ಮೂಲೆಯಲಿ
ಮಿನುಗುವಾ ನೀಲಮಣಿಗಳೊ ಕಣ್ಣಪಾಪೆಗಳೊ
ಪಾತಾಳ ಗೃಹದ ಮುಂಬಾಗಿಲಲಿ ನಿಂದಿರುವ
ವಿಷ್ಣು ಚಕ್ರಗಳೊ ನೇತ್ರ ಪರಿವೇಷ ಶೋಭೆಗಳೊ—

ಘೂ. ರಾ.— ಸಾಕಯ್ಯ ವರ್ಣನೆಯು. ತಪ್ಪನ್ನು ಒಪ್ಪಿರುವೆ,
ಮೆಚ್ಚಿದೆನು. ಊರಿನಲಿ ದೇಶದಲಿ ನಾವಿದ್ದು
ಕಳೆಯನ್ನು ಕಟ್ಟುವೆವು; ಮುನಿಸನ್ನು ಬಿಟ್ಟಿಹೆವು.
ಆದರೀ ನುಡಿಯೊಂದು ಹೇಳುವೆನು ಕೇಳಯ್ಯ.
ಅವರು ತೊಲಗುವ ತನಕ ರಕ್ತೋಪವನವನ್ನು
ಇಟ್ಟಣಿಕಿ ನೋಡಲೊಲ್ಲೆವು ನಾವು; ಅವರೆಂದು
ಉಪವನಕೆ ಕಾಲಿಡದೆ ಬೇರೆಡೆಗೆ ಪೋಗುವರೊ
ಅಂದಲ್ಲಿ ಬಂದಾವು ನೆಲಸುವೆವು. ನಿನಗೊಪ್ಪೊ?

ಕವಿ ರಾ.— ಎನ್ನ ದೊರೆ! ಎನಗೊಪ್ಪು. ಇನ್ನು ಮಾಡುವುದೇನು!
ಅವರೆಂದು ತೊಲಗುವರೊ ನಾನರಿಯೆ. ದೇಶದಲಿ
ರಮ್ಯ ವಸ್ತುಗಳೆಲ್ಲ ಹೆರರ ಅನುಭವದಲ್ಲಿ
ಸಾಲುಮಳಿಗೆಗಳೆಲ್ಲ ಹೆರರ ಕೈವಶದಲ್ಲಿ
ನಾವೆಲ್ಲ ನಿರ್ಲಿಪ್ತರಾಗಿಹೆವು. ಎನ್ನ ದೊರೆ!
ರಕ್ತೋಪವನವನ್ನು ನೀವೆಲ್ಲ ಬಿಟ್ಟಿರಲು
ನಾನೇನು ಬಿಟ್ಟಿರೆನೆ? ಬಿಟ್ಟಿಹೆನು ಬಿಟ್ಟಿಹೆನು.
ಗೊಗ್ಗೇಶ್ವರಾಲಯಕೆ ದಿನದಿನವು ನಾ ಹೋಗಿ
ಶಾಂತಿಯಂ ಪಡೆಯುವೆನು; ಎನ್ನುಮಂ ನಾಡುಮಂ
ದಯೆಯಿಂದ ಉಳಿಸಿರುವೆ, ನಿನಗೀಗ ಸಾಷ್ಟಾಂಗ

ವಂದನೆಯುಂ. ನಾಡಲಿಹ ಕ್ರಿಮಿ ಕೀಟ ಮೃಗಪಕ್ಷಿ
ಎನ್ನ ಬಂಧುಗಳಯ್ಯ, ತರುಲತೆಗಳೆಲ್ಲವುಂ
ಎನ್ನ ಬಳಗಗಳಯ್ಯ, ನೋಡಿ ಸುಖಿಸುವೆನಯ್ಯ.

(ಘೂಕರಾಜನು ವಂದಿಸಿ ಹೊರಟುಹೋಗುವನು.)

